

# ಸಿದ್ಧಗಂಗಾ

ಸಂಪುಟ : ೩೯ ಮಾರ್ಚಿ ೨೦೦೩ ಸಂಚಿಕೆ : ೩



ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಟಿ.ಎನ್. ಚತುರ್ವೇದಿ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ ಪಡೆದರು.



ರಾಜ್ಯದ ನೂತನ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಬಿ.ಎಸ್. ಪಾಟೀಲ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ ಪಡೆದರು.

ಓಂ

# ಸಿದ್ಧಗಂಗಾ ಮಾಸಪತ್ರಿಕೆ

ತ್ರಿವಿಧ ದಾಸೋಹ ಮೂರ್ತಿಗಳಾದ
**ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು**
ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಮಠ, ತುಮಕೂರು-572 104.

ದಿನಾಂಕ : 24.3.2003

## 3ನೇ ಸುತ್ತಿನ 1ನೇ/2ನೇ/3ನೇ/4ನೇ/5ನೇ/6ನೇ ಮನವಿ

ಮಾನ್ಯರೆ,

ಶ್ರೀಮಠದ ಮುಖವಾಣಿ "ಸಿದ್ಧಗಂಗಾ" ಮಾಸಪತ್ರಿಕೆ 39ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ನಾಡಿನಾದ್ಯಂತ ಪ್ರಸಾರ ಹೊಂದಿದೆ. ನೀವು ಆಜೀವ ಸದಸ್ಯತ್ವ ಹೊಂದಿರುವುದಕ್ಕೆ ಕೃತಜ್ಞತೆಗಳು.

"ಸಿದ್ಧಗಂಗಾ" ಮಾಸಿಕ ಪ್ರಗತಿ ಮತ್ತು ಪುರೋಭಿವೃದ್ಧಿ ಬಗೆಗೆ ನಿಮ್ಮೊಡನೆ ಮನವಿ ಮಾಡಲಾಗುತ್ತಿದೆ. "ಸಿದ್ಧಗಂಗಾ" 1998ರಿಂದ ಆಕರ್ಷಕ ಮುಖಪುಟ, ವಿನ್ಯಾಸ ಮತ್ತು ಮೌಲಿಕ ಲೇಖನಗಳಿಂದ ಪ್ರಕಟವಾಗುತ್ತಿದ್ದು ಓದುಗರ ಮೆಚ್ಚುಗೆಗೆ ಪಾತ್ರವಾಗಿದೆ. ಜೊತೆಗೆ ಪೇಪರ್ ಮತ್ತು ಮುದ್ರಣ ವೆಚ್ಚ ಅಧಿಕವಾಗಿದೆ. ಈ ಹೆಚ್ಚುವರಿ ವೆಚ್ಚವನ್ನು ಸರಿದೂಗಿಸುವುದು ಕಷ್ಟ / ತ್ರಾಸದಾಯಕವಾಗಿದೆ.

19..7... ನೇ ವರ್ಷದಲ್ಲಿ ನೀವು ಸಂದಾಯ ಮಾಡಿದ ಆಜೀವ ಚಂದಾ ..........1.0.1/ ರೂ.ಗಳು. ಇದನ್ನು ನಿಶ್ಚಿತ ಠೇವಣಿಯಲ್ಲಿಡಲಾಗಿದ್ದು ದೊರೆಯುವ ಪ್ರಸ್ತುತ ವಾರ್ಷಿಕ ಬಡ್ಡಿ ..........8/ ರೂ.ಗಳು. ಈ ನೂತನ ವಿನ್ಯಾಸದಿಂದ ಕೂಡಿರುವ 12 ಸಂಚಿಕೆಗಳಿಗೆ ಕಾಗದ, ಮುದ್ರಣ, ಅಂಚೆ ಮತ್ತು ಇತರ ಖರ್ಚುಗಳಿಗೆ ತಗಲುವ ವೆಚ್ಚ 95/- ರೂ. ಇದರ ಹೆಚ್ಚುವರಿ ಖೋತಾ ಮೊತ್ತವನ್ನು ಪರಮಪೂಜ್ಯ ಶ್ರೀ ಶ್ರೀಗಳು ಭರಿಸುತ್ತಿದ್ದಾರೆ.

**ವಿದ್ಯಾಸಾಗರವಾದ ಶ್ರೀಮಠದಲ್ಲಿ 8000 ವಿದ್ಯಾರ್ಥಿಗಳ ಬೆಳಕಿನ ಭವಿಷ್ಯ ರೂಪಿಸುತ್ತ ಮಹಾ ದಾಸೋಹವನ್ನು ನಿರಂತರವಾಗಿ ನಡೆಸಿಕೊಂಡು ಬರುತ್ತಿರುವ ಪೂಜ್ಯ ಶ್ರೀ ಶ್ರೀಗಳವರಿಗೆ ಸಿದ್ಧಗಂಗಾ ಮಾಸ ಪತ್ರಿಕೆ ಹೊರೆಯಾಗದಂತೆ ಆಜೀವ ಸದಸ್ಯರು ನೆರವಾಗಬೇಕಾಗಿ ನಮ್ಮ ವಿನಂತಿ. ಈ ಬಗ್ಗೆ ಯೋಚಿಸಿ ಚಿಂತನೆ ಮಾಡಿ ಮನವಿಗೆ ಮನ್ನಣೆ ನೀಡಿರಿ.**

**ದಯವಿಟ್ಟು ಮುಂದಿನ ಕ್ರಮ ತೆಗೆದುಕೊಳ್ಳಿರಿ :-**

ಪ್ರಸ್ತುತವಿದ್ದ ಆಜೀವ ಚಂದಾ 500/- ರೂ.ಗೆ ಸರಿಹೊಂದುವಂತೆ ಉಳಿಕೆ ..........400/- ರೂ.ಗಳನ್ನು (ಹಿಂದೆ ಸಂದಾಯ ಮಾಡಿದ್ದ ಆಜೀವ ಚಂದಾ ಕಳೆದು) ನಗದು / ಎಂ.ಓ./ಡಿ.ಡಿ./ಚೆಕ್ ಮೂಲಕ "ಸಿದ್ಧಗಂಗಾ" ಮಾಸಪತ್ರಿಕೆ ಹೆಸರಿನಲ್ಲಿ **ನಿಮ್ಮ ಆಜೀವ ಚಂದಾ ನಂಬರ್ LM** ..06.......... **ಸೂಚಿಸಿ** ಈ ವಿಳಾಸಕ್ಕೆ ಕಳುಹಿಸಬೇಕಾಗಿ ಬಿನ್ನವಿಸಿಕೊಳ್ಳುತ್ತೇವೆ.

"ಸಿದ್ಧಗಂಗಾ" ನಿಮ್ಮ ಮನೆ-ಮನ ಪ್ರಕಾಶಿಸುವಂತೆ ನಿರಂತರ ಮುನ್ನಡೆಗೆ ಯಶಸ್ಸು ಕೋರಿ ಹರಸಿ ಹಾರೈಸಬೇಕಾಗಿ ಪ್ರಾರ್ಥನೆ.

ಧನ್ಯವಾದಗಳೊಂದಿಗೆ,
**ಹೆಚ್.ಬಿ. ಗಂಗಾಧರಯ್ಯ**
ಪ್ರಕಾಶಕರು,
ಸಿದ್ಧಗಂಗಾ ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು-572 104.

## ಹತಾಶ ಪರಸ್ಥಿತಿ .......

ಮಳೆ ಬರಲಿಲ್ಲ ಕುಡಿಯಲು ನೀರಿಲ್ಲ. ಹಳ್ಳಿಗಳ ಕಡೆ ದನಕರುಗಳ ಪಾಡು ಹೇಳತೀರದು. ದೂರದೂರದಿಂದ ನೀರನ್ನು ಹೊತ್ತು ತರುವ ದೃಶ್ಯ. ಕೆರೆ, ಬಾವಿಗಳೆಲ್ಲ ಬತ್ತಿವೆ. ಕೊಳವೆ ಬಾವಿಗಳ ನೀರಿನಮಟ್ಟ ಕುಸಿದಿದೆ. ಬರಪರಿಸ್ಥಿತಿ ಬಿಗಡಾಯಿಸಿದೆ. ಬಡವರ ಕಷ್ಟ ಹೇಳತೀರದು. ಮೂಕಪ್ರಾಣಿಗಳ ನಿಟ್ಟುಸಿರನ್ನು ಸಹಿಸಲಾರದೆ ಸಾಕಲಾರದೆ ಹೋದಷ್ಟಕ್ಕೆ ಕಟುಕರಿಗೆ ಮಾರಿ ಕೈತೊಳೆದುಕೊಳ್ಳುತ್ತಿದ್ದಾರೆ. ಧಾರಣೆವಾಸಿಗಳು ಮಧ್ಯಮವರ್ಗದ ಜನರೂ ತತ್ತರಿಸುವಂತೆ ಏರುತ್ತಿವೆ. ರಾಗಿಯ ಬೆಲೆ ಎಂಟುನೂರು ರೂ. ಅಕ್ಕಿಯಂತೂ ಎರಡು ಸಾವಿರದವರೆಗೆ ದಾಟುತ್ತಿದೆ. ಖಾದ್ಯ ತೈಲ ಕೇಳುವಂತಿಲ್ಲ. ರೈತರ ಸ್ಥಿತಿ ಆತ್ಮಹತ್ಯೆಯತ್ತ. ಸಾಲದ ಉರುಳು ಕೊರಳಿಗೆ. ಇಷ್ಟೆಲ್ಲಾ ನಡೆದಿದ್ದರೂ ಆಳುವ ಜನನಾಯಕರು ಪ್ಲೇವಿನ್ ಲಾಟರಿಯ ಸಮರ್ಥನೆ ಮಾಡುತ್ತಿದ್ದಾರೆ. ಸರ್ಕಾರದ ಆದಾಯದ ಮೂಲ ಎನ್ನುತ್ತಿದ್ದಾರೆ. ಮಹಿಳೆಯರಿಗೆ ನೀತಿ ಬೋಧ ಪಾಠ ಹೇಳಿಕೊಡುತ್ತಿದ್ದಾರೆ. ನೀತಿಯನ್ನು ಹರಾಜಿಗಿಟ್ಟಿದ್ದಾರೆ. ಹೆಂಡ, ಜೂಜುಗಳ ವ್ಯಾಪಾರ ನೀತಿಯ ಬೋಧನೆ ನಡೆದಿದೆ. ಪ್ರಜಾಪ್ರಭು ನೆಲಕಚ್ಚುತ್ತಿದ್ದಾನೆ. ಯಾರು ರಕ್ಷಿಸುವವರು ಹತಾಶ ಪರಿಸ್ಥಿತಿ.

ಶ್ರೀಮಠದಲ್ಲಿ ಜಾತ್ರೆ ನಡೆಯಿತು. ಬಡವರು ಬಗ್ಗರು ಹೊಟ್ಟೆಗಿಲ್ಲದವರು, ಇದ್ದವರು ಎರಡು ವಾರ ಪರ್ಯಂತ ಹೊಟ್ಟೆತುಂಬಾ ಊಟಮಾಡಿದರು. ''ನಮ್ಮಪ್ಪ ಸ್ವಾಮಿಗಳು ಇಂಥ ಬರಗಾಲದಲ್ಲಿ ನಮ್ಮನ್ನು ಸಾಕ್ತಾ ಅವ್ರೆ. ಜಾತ್ರೆ ಅವ್ರಿಗೊಂದು ನೆಪ'' ಅಷ್ಟೆ; ಅಂದುಕೊಂಡರು ಸಾವಿರಾರು ಜನ. ಮನಸ್ಸು ದೊಡ್ಡದಾಗಿದ್ರೆ ಎಲ್ಲವೂ ನಡೀತದೆ ಎಂದವರು ಮತ್ತಷ್ಟು ಹೃದಯವಂತರು. ಹೌದು ೧೯.೨.೨೦೦೩ರಿಂದ ೫.೩.೨೦೦೩ರ ವರೆಗೆ ಜಾತ್ರೆ ನಡೆಯಿತು. ದೇವರ ಉತ್ಸವಗಳು, ಜಾನುವಾರುಗಳ ಜಾತ್ರೆ (ಈ ವರ್ಷ ತುಂಬಾ ಕಡಿಮೆ ಜಾನುವಾರುಗಳು) ಅವುಗಳಿಗೆ ಬಹುಮಾನ ವ್ಯವಸ್ಥೆ, ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ, ೧೨೫ ಮಳಿಗೆಗಳು ಭಾಗವಹಿಸಿದ್ದವು, ಉತ್ತಮ ಪ್ರದರ್ಶನಗಳೆನಿಸಿದ ಕೃಷಿ ಮತ್ತು ಅರಣ್ಯ ಇಲಾಖೆಗಳಿಗೆ ಪಾರಿತೋಷಕ, ಉಳಿದವುಗಳಿಗೆ ಬಹುಮಾನ, ಸಾವಿರ ಸಾವಿರ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನಾ ಸಭೆಯ ಸಂದರ್ಭದಲ್ಲಿ ಪ್ರವಚನ, ಜನಪದ ಕಲೆಗಳ ಪ್ರದರ್ಶನ – ಎಲ್ಲವನ್ನೂ ತೊಂಬತ್ತೈದರ ತುಂಬು ವಯಸ್ಸಿನ ಶ್ರೀಗಳವರು ನಡೆಸಿದ್ದು, ಕಿರಿಯ ಶ್ರೀಗಳವರ ಕಿಂಕರತ್ವದ ಸಹಕಾರ, ಜಾತ್ರೆಯನ್ನು ಅನೌಪಚಾರಿಕ ಶಿಕ್ಷಣ ಶಿಬಿರವನ್ನಾಗಿಸಿದ್ದು ಸ್ಮರಣೀಯ.

ಜಾತ್ರೆಯ ಸಂದರ್ಭದಲ್ಲಿ ಶ್ರೀಮಠಕ್ಕೆ ಭೇಟಿಕೊಟ್ಟ ಸಚಿವರು, ಸಂಸದರು, ಶಾಸಕರು, ಸಮೂಹ ಮಾಧ್ಯಮದವರು, ರಕ್ಷಣಾ ಇಲಾಖೆಯವರು, ಸಾರಿಗೆ ಇಲಾಖೆಯವರು, ಶಿಕ್ಷಕರು, ವಿದ್ಯಾರ್ಥಿಗಳು, ಹಳೆಯ ವಿದ್ಯಾರ್ಥಿಗಳು, ಸೇವೆಯೇ ಜೀವನ ಧ್ಯೇಯವಾಗಿಸಿಕೊಂಡಿರುವ ''ಆಂಧ್ರದ ತಾತ''ನಂಥವರು ಅಭಿನಂದನೀಯರು.

– ಸಂಪಾದಕ





## ಕೃಷಿ ಮತ್ತು ಪಶು ಸಂಪತ್ತು

*ಹಾಲುಬ್ಬಲು, ಮರಳುಕಾಂತಿ, ದೇವಮಲ್ಲಿಗೆ, ಅಕ್ಕಿ ಇಂದು ಹುಡುಕಿದರೂ ಸಿಕ್ಕುವುದಿಲ್ಲ. ಅವನ್ನು ಬೆಳೆಯುವವರೇ ಇಲ್ಲ. ಎಕರೆ ಒಂದಕ್ಕೆ ನಲವತ್ತು ಪಲ್ಲ ಬೆಳೆಯುತ್ತಿದ್ದ ರೈತರಿದ್ದರು ಹಿಂದೆ. ಸೀಮೆಗೊಬ್ಬರವನ್ನು ಮಾತ್ರ ಹಾಕುತ್ತಿದ್ದರು. ಗದ್ದೆಗೆ ರಾಸಾಯನಿಕ ಗೊಬ್ಬರಗಳು ಗೊತ್ತೇ ಇರಲಿಲ್ಲ. ದನವಿನ ಗೊಬ್ಬರ, ಹೊಂಗೆಸೊಪ್ಪು ಹಾಕುತ್ತಿದ್ದರು ಅಷ್ಟೇ. ಭೂಮಿಯ ಫಲವತ್ತತೆಗೆ ಯಾವುದೇ ತೊಂದರೆ ಬರುತ್ತಿರಲಿಲ್ಲ. ಆ ಅಕ್ಕಿಯಿಂದ ಅನ್ನ ಮಾಡುತ್ತಿದ್ದರೆ ಮನೆತುಂಬಾ ಘಮ ಘಮದ ಪರಿಮಳ. ಇಂದು ರಾಸಾಯನಿಕ ಗೊಬ್ಬರದ ಬಳಕೆಯಿಂದ ಗದ್ದೆಗಳೆಲ್ಲ – ಹೊಲಗಳೆಲ್ಲ ನಿಸ್ಸಾರವಾಗುತ್ತಿವೆ. ಸಹಜ ಕೃಷಿಯಿಂದ ಹೀಗಾಗುತ್ತಿರಲಿಲ್ಲ. ಕೃತಕ ಗೊಬ್ಬರದ ಬಳಕೆಯಿಂದ ಅಲ್ಪಕಾಲದಲ್ಲಿ ಅಧಿಕ ಬೆಳೆಯನ್ನೇನೂ ತೆಗೆಯಬಹುದು. ಆದರೆ ಅದರಿಂದ ಬಂದ ಧಾನ್ಯ ರುಚಿಯಿರದ, ವಾಸನೆಯಿರದ, ಬಣ್ಣವಿರದ ಕಾಳಾಗಿ ಊಟಮಾಡಿದಾಗ ತೃಪ್ತಿಯನ್ನೂ ಕೊಡದಂತಾಗಿದೆ. ಅಷ್ಟೇ ಅಲ್ಲ ಕೃತಕ ಗೊಬ್ಬರ ಬಳಸಿ ಬೆಳೆದ ಧಾನ್ಯಗಳು ಚರ್ಮರೋಗಕ್ಕೂ ಕಾರಣವಾಗಿವೆ ಎನ್ನುತ್ತಾರೆ ಪ್ರಾಜ್ಞರು. ನಾವಿಂದು ಊಟಮಾಡುತ್ತಿರುವ ಅಕ್ಕಿ ''ಸಿಲ್ಕ್ ಪಾಲಿಷ್'' ಮಾಡಿದ್ದಾಗಿ ಬೆಳ್ಳಗಿರುತ್ತದೆ. ಆದರೆ ಸತ್ವಹೀನವಾಗಿರುತ್ತದೆ. ಜೀವಾಂಶ ನಷ್ಟವಾದ ಬಿಳಿ ಬಣ್ಣದ ಅಗುಳು ಅದು ಅಷ್ಟೆ.*

*ಪಶು ಸಂಪತ್ತು ದಿನೇ ದಿನೇ ಕಣ್ಮರೆಯಾಗುತ್ತಿದೆ. ರೈತರು ಹಿಂದೆ ಒಂದೊಂದು ಮನೆಯಲ್ಲಿಯೂ ಹತ್ತಾರು ದನಗಳು, ಎತ್ತುಗಳು, ಹೋರಿಗಳು ಇರುತ್ತಿದ್ದವು. ಅದೊಂದು ಹೆಮ್ಮೆಯ ಸಂಗತಿಯಾಗಿತ್ತು. ರೈತನ ತಿಪ್ಪೆ ನೋಡಿ ನಂಟಸ್ತಿಕೆ ಬೆಳೆಸುವ ಸಂಪ್ರದಾಯವಿತ್ತು. ಮನೆಯ ಯಜಮಾನ ಮನೆಯ ದನಕರುಗಳಿಗೆ ಹುಲ್ಲು ನೀರು ಹಾಕಿದ ಮೇಲೆಯೇ ತಾನು ಊಟ ಮಾಡುತ್ತಿದ್ದ. ಎದ್ದ ತಕ್ಷಣ ಅವುಗಳನ್ನೊಮ್ಮೆ ನೋಡಿಯೇ ದೈನಂದಿನ ಕೆಲಸ ಆರಂಭಿಸುತ್ತಿದ್ದ. ಅವಕ್ಕೇನಾದರೂ ಕಾಯಿಲೆ ಕಸಾಲೆಯಾದರೆ ಮರುಗುತ್ತಿದ್ದ. ತನಗೆ ತಿಳಿದ ಔಷಧಿ ಕೊಡಿಸುತ್ತಿದ್ದ. ಅವು ತೀರಿಕೊಂಡರೆ ತನ್ನ ಹೊಲದಲ್ಲಿ ಸಮಾಧಿ ಮಾಡುತ್ತಿದ್ದ. ತನ್ನ ಜೀವನದ ಅವಿಭಾಜ್ಯ ಅಂಗವಾದ ಅವುಗಳನ್ನು ಪ್ರೀತಿಯಿಂದ ಕಾಣುತ್ತಿದ್ದ. ಸೋಮವಾರ ಅವುಗಳನ್ನು ನೇಗಲಿಗೆ ಕಟ್ಟುತ್ತಿರಲಿಲ್ಲ. ಎತ್ತನ್ನು 'ನಂದಿ'ಯೆಂದೇ ಭಕ್ತಿಯಿಂದ ಪೂಜಿಸುತ್ತಿದ್ದ. ಶ್ರಮಿಕತ್ವದ ಆರಾಧಕನಾಗಿದ್ದ. ದುಡಿವ ಎತ್ತನ್ನು ಹೆತ್ತ ಮಗನೆಂದೇ ಭಾವಿಸಿ ನಡೆದುಕೊಳ್ಳುತ್ತಿದ್ದ. ಅವುಗಳ ಕೋಡಿಗೆ ಕಲಶ ತೊಡಿಸಿ, ಕೊರಳಿಗೆ ಗಂಟೆ ಗೆಜ್ಜೆಕಟ್ಟಿ ಅವು ನಡೆದಾಗ ಆ ಶೃಂಗಾರ ಕಂಡು, ಸದ್ದು ಕೇಳಿ ಸಂತೋಷಿಸುತ್ತಿದ್ದ, ಮನೆಯಲ್ಲಿನ ಹಸುವೋ, ಎಮ್ಮೆಯೋ ಕರುಹಾಕಿದರೆ ಗಿಣ್ಣದ ಹಾಲನ್ನು ತನ್ನ ಮನೆ ದೇವರಿಗೆ ಅಭಿಷೇಕಕ್ಕೆ ಅರ್ಪಿಸಿ ದೇವಕೃಪೆಗಾಗಿ ಪ್ರಾರ್ಥಿಸುತ್ತಿದ್ದ. ಭೂಮಿಯನ್ನು, ಗೋವನ್ನು, ನದಿಯನ್ನು ಮಾತೆಯೆಂದು ಗೌರವಿಸುತ್ತಿದ್ದ. ಆದರೆ ಇಂದು ಇದೆಲ್ಲ ಬದಲಾಗಿದೆ. ನಿರ್ಜೀವ ಯಂತ್ರಾವಲಂಬಿಯಾಗಿ ತಾನೂ ನಿರ್ಭಾವುಕನಾಗಿ, ಕೇವಲ ಲಾಭ-ನಷ್ಟಗಳ ವ್ಯಾಪಾರಿಯಾಗಿ, ತನ್ನದೂ ಒಂದು ವೃತ್ತಿಯೆಂದು ತಿಳಿದು ನಡೆದಿದ್ದಾನೆ. ಕೃಷಿ, ವ್ಯವಸಾಯ, ಬೇಸಾಯ. ಅದು ಇತರ ವೃತ್ತಿಗಳಂತೆ ವೃತ್ತಿಯಲ್ಲ; ಅದು ಲೋಕಸಂರಕ್ಷಣೆ ಮಾಡುವ ಧರ್ಮ, ಸಕಲ ಜೀವರಾಶಿಗಳಿಗೆ 'ಅನ್ನ' ನೀಡುವ ದಾಸೋಹ ಧರ್ಮ. ಹೌದು, ಹಿಂದೆ ಸುಗ್ಗಿಯ ಕಾಲದಲ್ಲಿ ''ಕಣ''ದಲ್ಲಿ ಗಟ್ಟಿಯಾಗಿ ಮಾತಾಡುತ್ತಿರಲಿಲ್ಲ, ಪಾದರಕ್ಷೆಗಳನ್ನು ಹಾಕಿಕೊಂಡು ತಿರುಗಾಡುತ್ತಿರಲಿಲ್ಲ, ಜಗಳವಾಡುತ್ತಿರಲಿಲ್ಲ, ಧೂಮಪಾನ ಮಾಡುತ್ತಿರಲಿಲ್ಲ. ಏಕೆಂದರೆ ಧಾನ್ಯರೂಪಿ ದೇವರು ಅಲ್ಲಿ ನೆಲಸಿದ್ದಾನೆ ಎಂಬ ಭಾವುಕ ಭಕ್ತಿಯಿಂದ ಇಂದು ಕಣ ಮಾಡುವವರೂ ಇಲ್ಲ. ಎಲ್ಲ ಡಾಂಬರು ರಸ್ತೆಯಲ್ಲಿ ಬಸ್ಸು, ಲಾರಿಗಳು ಓಡಾಡುವ ಮಾರ್ಗ ಮಧ್ಯದಲ್ಲಿ ಧಾನ್ಯ ಒಕ್ಕುವ ಕೆಲಸ. ಶ್ರಮ ಬೇಕಿಲ್ಲದ ಮನೋಧರ್ಮ. ಯಂತ್ರಗಳಿರಲಿ, ಗೋಸಪಂತ್ತೂ ಇರಲಿ ಎಂಬ ಭಾವನೆ ನಮ್ಮದಾಗಬೇಕು''. ಹಳೇಬೇರು ಹೊಸಚಿಗುರು ಕೂಡಿರಲು ಮರ ಸೊಬಗು'' – ಎಂದಲ್ಲವೆ ಕವಿವಾಣಿ ಹರಸಿದ್ದು.*

❄

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಕಾವಿಯ ಸೀರೆಯ ವೊಡೆಯರು*
*ಬಾವಿಯ ಆಳವ ನೋಡಿಹೆನೆಂದು ಹೋದರೆ*
*ಬಾವಿಯ ಭಗದೇವಿ ನುಂಗಿದ್ದ ಕಂಡೆನಯ್ಯ*
*ಬಾವಿಯ ಹೂಳಿ, ಭಗದೇವಿಯ ಕೊಂದು*
*ಕಾವಿಯ ಸೀರೆಯ ಹರಿದಲ್ಲದೆ*
*ದೇವರ ಕಾಣಬಾರದು; ಪ್ರಾಣಲಿಂಗಸಂಬಂಧಿಗಳೆಂಬರೆ*
*ನಾಚದವರನೇನೆಂಬೆನಯ್ಯ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !*

ರಜೋಗುಣಿಗಳು ಅಹಂಕಾರಿಗಳು ಸಂಸಾರದಲ್ಲಿ ಸುಖವನ್ನು ಅರಸಬೇಕೆಂದು ಪ್ರಾಪಂಚಿಕ ವ್ಯವಹಾರಿಗಳಾದರೆ ನಿಜ ತಿಳಿಯದು. ಆ ಸಂಸಾರ ಸಂಬಂಧವಾದ ವಿದ್ಯೆಯನ್ನಾವರಿಸಿರುವ ರಹಸ್ಯವನ್ನು ಸುಜ್ಞಾನಿಯಾದ ಶರಣನು ಜ್ಞಾನನೇತ್ರದಿಂದ ಕಂಡನು. ಅಂತಹ ಸುಜ್ಞಾನಿಯಾದ ಜೀವನು ಗುರುಕಾರುಣ್ಯಪುಣ್ಯನಾಗಿ, ಲಿಂಗಾಂಗ ಸಂಬಂಧಿ ಯಾಗಿ, ಜ್ಞಾನಕ್ರಿಯೆಪಿಡಿದಾಚರಿಸಿ, ಸಕಲ ಪ್ರಪಂಚವನ್ನು ಲಿಂಗ ಸಂಬಂಧದಿಂದ ನಿವೃತ್ತಿಗೊಳಿಸಿ, ಸಂಸಾರ ಸಂಬಂಧ ವಾದ ಅಜ್ಞಾನವನ್ನು ಅಳಿದು, ಅಹಂಕಾರ ಮುಕ್ತನಾದಲ್ಲದೆ ಲಿಂಗದ ನಿಜ ಗೋಚರಿಸದು. ಪ್ರಪಂಚ ಭಾವದಿಂದ ಅಜ್ಞಾನುಸಾರಿಗಳಾಗಿ, ಜನನ ಮರಣಗಳಿಗೊಳಗಾಗಿ, ತಾಪತ್ರಯಾಗ್ನಿಯಿಂದ ಬೇಯುತ್ತ, ತಾವು ಅಸುಲಿಂಗ ಸಂಬಂಧಿಗಳೆಂದು ಹೇಳಿಕೊಳ್ಳಲಾಗದ ಅಜ್ಞಾನಿಗಳನ್ನು ಏನೆಂದು ವರ್ಣಿಸಲಿ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಚಿತ್ತ ಅತ್ತಿಯಹಣ್ಣು ಹುರುಳಿಲ್ಲದ ಬುರುಡೆ
ಡಂಬು ಡಳಹಿನ ಮೊತ್ತ ನಾನಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಬ್ದ ಸೂತಕಿಯಾದೆ ಸದ್ದು ಗದ್ದಲಗೈದೆ
ಸುಜ್ಜನ ಸಂಗದಿ ನಾನಿರದಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪುರುಷ ಪುಂಗವನಾದೆ ಪರುಷಮಣಿ ನೀನಾದೆ
ಹರುಷದ ಹೊಳೆಯಾಗಿ ನೀ ಹರಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನು ಬಲ್ಲೆನೆ ತಂದೆ ನಿಮ್ಮ ಸತ್ಯದ ನಿಲವ
ನಾನು ಬಲ್ಲನೆ ಪ್ರಭುವೆ ನಿಮ್ಮೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಜುವೆನಂಜುವೆ ಜಂಗಮ ಪುಣ್ಯವೆ
ಅಂಜುವೆನಂಜುವೆ ತವನುಡಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೀರ್ತಿವಾರ್ತೆಬೇಡ ಭೋಗ ಭಾಗ್ಯವು ಬೇಡ
ಸೇವೆ ಸೌಭಾಗ್ಯದ ನೀಡೆನಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಪ್ರತಿಮ ಶಿವಯೋಗಿ ಸುಪ್ರತಿಮ ಚರಿತನೆ
ಅಸಮ ದಾಸೋಹಿಯೆ ಶುಭ ದೊರೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಾಳಿ ಗಂಧವ ಕೂಡಿ ಕಂಪ ಸೂಸುವಂತೆ
ಅರಿವು ಆಚಾರಗಳ ಪಸರಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಿನ್ನಪವನವಧರಿಸು ಚೆನ್ನ ಶ್ರೀಲಿಂಗವೆ
ಚಿನ್ಮಯ ನಿಜನಿರಾಲಂಬವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುರೂಪದಿ ಸುಳಿದಿರುವೆ ನಿಜಲಿಂಗದಿ ಬೆರೆದಿರುವೆ
ಜಗದಿ ಜಂಗಮವಾಗಿ ಬೆಳಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

## ಶ್ರೀ ಗುರುವಂದನ ಮಹೋತ್ಸವ



ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು, ತ್ರಿವಿಧದಾಸೋಹಿಗಳು, ಪರಮ ತಪೋಧನರು ಶ್ರೀ ಮ.ನಿ.ಪ್ರ. ಸ್ವರೂಪಿಗಳಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೬ನೇ ಜನ್ಮದಿನೋತ್ಸವ ಸಮಾರಂಭವನ್ನು ದಿನಾಂಕ : ೬.೪.೨೦೦೩ ಭಾನುವಾರ ಬೆಳಿಗ್ಗೆ ೧೦.೦೦ಕ್ಕೆ ಏರ್ಪಡಿಸಲಾಗಿದೆ. ದಿವ್ಯ ಅಧ್ಯಕ್ಷತೆಯನ್ನು ಜೇವರಗಿ ಶ್ರೀ ಷಣ್ಮುಖ ಶಿವಯೋಗಿ ವಿರಕ್ತ ಮಠದ ಅಧ್ಯಕ್ಷರಾದ ಶ್ರೀ ಮ.ನಿ.ಪ್ರ. ಸ್ವರೂಪಿ ಪರಮಪೂಜ್ಯ ಶ್ರೀ ಶ್ರೀ ಶಾಂತಲಿಂಗ ಮಹಾಸ್ವಾಮಿಗಳವರು ವಹಿಸಲಿದ್ದಾರೆ.

ಸಮಾರಂಭದಲ್ಲಿ ವಿವಿಧ ಮಠಾಧೀಶರು, ಕೇಂದ್ರ ಸರ್ಕಾರದ ಸಚಿವರು, ಸಂಸದರು, ರಾಜ್ಯ ಸರ್ಕಾರದ ಸಚಿವರು, ಶಾಸಕರು, ಗಣ್ಯಮಾನ್ಯರು, ವಿದ್ವಾಂಸರು, ಭಕ್ತಾದಿಗಳು ಭಾಗವಹಿಸುತ್ತಾರೆ.

ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಪಾಲ್ಗೊಳ್ಳುತ್ತಾರೆ.

ತಾವು ಭಾಗವಹಿಸಿ ಸಮಾರಂಭವನ್ನು ಯಶಸ್ವಿಗೊಳಿಸಬೇಕಾಗಿ ಪ್ರಾರ್ಥಿಸುತ್ತೇವೆ.

ತಮಗೆ ಸುಸ್ವಾಗತ

ತಮ್ಮ ಆಗಮನಾಭಿಲಾಷಿಗಳು
ಶ್ರೀ ಸಿದ್ಧಲಿಂಗ ಸ್ವಾಮಿಗಳು
ಕಿರಿಯ ಶ್ರೀಗಳು ಹಾಗೂ ಗುರುವಂದನಾ
ಸಮಿತಿ ಮತ್ತು ಭಕ್ತ ಮಂಡಳಿ
ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ

## ವಚನಗಳ ವಿಶ್ಲೇಷಣೆ

*ಮಾಡಿದೆನೆಂಬುದು ಮನದಲ್ಲಿ ಹೊಳೆದರೆ*
*ಏಡಿಸಿ ಕಾಡಿತ್ತು ಶಿವನ ಡಂಗುರ!*
*ಮಾಡಿದೆನೆನ್ನದಿರಾ ಲಿಂಗಕ್ಕೆ!*
*ಮಾಡಿದೆನೆನ್ನದಿರಾ ಜಂಗಮಕ್ಕೆ!*
*ಮಾಡಿದೆನೆಂಬುದು ಮನದಲಿಲ್ಲದಿದ್ದರೆ*
*ಬೇಡಿತ್ತನೀವ ನಮ್ಮ ಕೂಡಲಸಂಗಮದೇವ!*

ಕಳ್ಳನು ಮಾಡಬಾರದುದನ್ನು ಮಾಡಿ ಮುಚ್ಚಿಕೊಳ್ಳುತ್ತಾನೆ. ಸಭ್ಯನೆಂಬುವನು ಮಾಡಬೇಕಾದುದನ್ನು ಮಾಡಿ ಕೊಚ್ಚಿಕೊಳ್ಳುತ್ತಾನೆ. ಕಳ್ಳನು ಮುಚ್ಚಿಕೊಳ್ಳುವುದು ಸರಿಯೇ : ಅದು ಮಾಡಬಾರದುದು ! ಸಭ್ಯನು ಕೊಚ್ಚಿಕೊಳ್ಳುವುದಂತೂ ಅಕ್ಷಮ್ಯ. ಏಕೆಂದರೆ ಅವನು ತನ್ನ ಕರ್ತವ್ಯವನ್ನು ಮಾತ್ರ ಮಾಡಿ ಮುಗಿಸಿದ್ದಾನೆ. ಅದಕ್ಕೇಕೆ ಬಡಾಯಿ? ಸಭ್ಯನ ಆ ಬಡಾಯಿಯಲ್ಲಿ – ತನಗಿಂತ ಅನ್ಯನಾದವನು ಬಡಪಾಯಿ, ಅವನಿಂದ ಆಗದುದನ್ನು ನಾನು ಮಾಡಿರುವೆನೆಂಬ ಅನ್ಯಾಪಮಾನಕಾರಕ ಮಿಥ್ಯಾಂಶ ಹುದುಗಿದೆ. ಕಳ್ಳನ ಮುಚ್ಚುವಿಕೆಯಲ್ಲಾದರೋ, ತಾನು ಮಾಡಿರುವುದು ಅನ್ಯಾಯ, ಅಶ್ಲೀಲ, ಅದನ್ನು ಕೇಳಿ ಜನ ಖತಿಗೊಂಡಾರು ಎಂಬ ದೈನ್ಯಭೀತಿಯಿದೆ. ಈ ದೃಷ್ಟಿಯಿಂದ ತನ್ನ ಕರ್ತವ್ಯವಾದ ಧರ್ಮಕಾರ್ಯಗಳನ್ನು ಮಾಡಿದ ಸಭ್ಯನು ಹಮ್ಮಿನಿಂದ ವರ್ತಿಸಿದರೆ, ಅವನು ಕಳ್ಳನಿಗಿಂತ ಹೆಚ್ಚು ಅಪರಾಧಿ.

ಈ ತೂಕದ ಪ್ರಕಾರ, ಕಡಿಮೆ ಅಪರಾಧ ಮಾಡಿದವನೆಂಬ ಕಳ್ಳನನ್ನೂ ಶಿಕ್ಷಿಸದೆ ರಾಜನು ಬಿಡುವುದಿಲ್ಲ. ಅವನನ್ನು ಶೂಲಕ್ಕೇರಿಸುವಂತೆ ಆಜ್ಞಾಪಿಸುವನು. ತಲೆಹೊಯ್ಕರು ಡಂಗುರಹೊಯ್ದು ಬೀದಿಬೀದಿಯಲ್ಲಿ ಅವನನ್ನು ಮೆರೆಸಿ, ವಧ್ಯಸ್ಥಾನಕ್ಕೆ ಕರೆದೊಯ್ಯುವರು. ಅಂದ ಮೇಲೆ – ಪ್ರಕಟನ ಕಾಮಿಯಾಗಿ ಮಹಾಪರಾಧಿಯಾಗಿ ಆ ಸಭ್ಯಂಮನ್ಯನನ್ನು ರಾಜ-ರಾಜನಾದ ಶಿವನು ಬಿಟ್ಟಾನೆ! ಕಳ್ಳನನ್ನು ಶಿಕ್ಷಿಸಲು ರಾಜನಿಗೆ ಹೊರಗಣ ರುಜುವಾತುಬೇಕು. ಅದು ಒದಗದೇ ಕಳ್ಳನೊಬ್ಬ ಶಿಕ್ಷೆಯಿಂದ ತಪ್ಪಿಸಿಕೊಳ್ಳಬಹುದು. ಆದರೆ ಭಕ್ತನಾದವನ ಕೀರ್ತಿಕಾಮಾಪರಾಧವು ಪ್ರಚ್ಛನ್ನವಾಗಿದ್ದರೂ, ಅದನ್ನು ಅಂತರ್ಯಾಮಿಯಾದ ಶಿವನು ಅರಿತು, ಅದಕ್ಕೆ ಸರಿತೂಗುವ ಶಿಕ್ಷೆಯನ್ನು ಕೊಟ್ಟೇ ತೀರವನು. ಮೆರೆಯಬೇಕೆಂದವನನ್ನು ಇನ್ನೂ ಹೆಚ್ಚಾಗಿ ಮೆರೆಸಿ ಮುರಿಯುವನು.

ಮಾಡಿದೆನೆಂಬುದು ಮನದಲ್ಲಿ ಹೊಳೆದುದಕ್ಕೆ ಶಿವನ ಈ ಪ್ರತಿಕ್ರಿಯೆ, ಕಾಣುವಂತೆ ಕಟುವಾದುದೇನೂ ಅಲ್ಲ. ಮೊದಲನೆಯದಾಗಿ – ಅನುಕೂಲವಾತಾವರಣವಿಲ್ಲದಾಗಲೂ ಕರ್ತವ್ಯ ಪರಿಪಾಲನೆ ಅಪರಿಹಾರ್ಯ! ಎರಡನೆಯದಾಗಿ ಕರ್ತವ್ಯವನ್ನು ಪಾಲಿಸಿದವನು, ಅದನ್ನು ಕೊಟ್ಟಿಕೊಳ್ಳುವುದರಲ್ಲಿ, ಇತರರ ಕಾಲವನ್ನು ಅಪಹರಿಸುವುದು ಕಳ್ಳತನವಲ್ಲದೆ ಅದಕ್ಕಿಂತ ಕಡಿಮೆಯೇನೂ ಅಲ್ಲ. ಜೊತೆಗೆ ಅವನು ಸ್ವಪ್ರಶಂಸೆಯಲ್ಲಿ ತೊಡಗಿದ್ದಷ್ಟು ಕಾಲವೂ ಕರ್ತವ್ಯಭ್ರಷ್ಟನಾಗಿರುವನು. ಇದು ಪ್ರಕಟವಾಗಿ ತನ್ನನ್ನು ತಾನೇ ಹೊಗಳಿಕೊಳ್ಳುವವನಿಗೆ ಅನ್ವಯಿಸುವ ಮಾತು. ಹಾಗಲ್ಲದೆ, ಪ್ರಶಂಸಾಲಾಲಸೆಯನ್ನು ಮನಸ್ಸಿನಲ್ಲೇ ಇಟ್ಟುಕೊಂಡಿರುವವನು, ಅದನ್ನು ಇನ್ನೊಬ್ಬರ ಬಾಯಿಂದ ಹೇಳಿಸುವ ಬಲಾತ್ಕಾರದ ಪರಿಸ್ಥಿತಿಗೆ ಕಾರಣಕರ್ತನಾಗುವನು. ಭಕ್ತನು ಈ ಕೌಟಿಲ್ಯ ಜಟಿಲತಂತ್ರದಲ್ಲಿ ಮಗ್ನನಾದನೆಂದರೆ ಕರ್ತವ್ಯಗಳಿಗೆ ಅವನು ತಿಲಾಂಜಲಿಯಿತ್ತಂತೆಯೇ!

ಶಿವನಿಗೆ ಪ್ರಿಯವಾದುದು ನಿರಂಹಕಾರ ಮತ್ತು ನಿರಾಡಂಬರ. ಅವಿಲ್ಲದಿದ್ದರೆ ಉಗ್ರಕೋಪ; ಪರಿಣಾಮ – ದುರ್ಗತಿ. ಆದುದರಿಂದ ಲಿಂಗಕ್ಕೆ, ಜಂಗಮಲಿಂಗ ಸ್ವರೂಪಿಯಾದ ಜಂಗಮನಿಗೆ ಮಾಡಿದೆನೆಂದು ಕೊಚ್ಚಿಕೊಳ್ಳಬೇಡಿ. ನಾವು ಅವರಿಗೆ ಮಾಡುವ ಸತ್ಕಾರಕ್ಕಿಂತ, ಅವರು ನಮಗೆ ಮಾಡಲವಕಾಶಕೊಟ್ಟ ಕೃಪೆ ದೊಡ್ಡದು. ಸ್ವಾಮಿಗಾಗಿ ಸೇವಕನು ದುಡಿದು ವಿನಮ್ರನಾಗಿರುವನೇ ಹೊರತು – ತಾನು ಮಾಡಿದ್ದೆಲ್ಲ ಉಪಕಾರವೆಂಬಂತೆ ಉದ್ವೃತ್ತನಾಗಿರುವುದಿಲ್ಲ. ಅದು ಅವನ ಕರ್ತವ್ಯವೆಂಬುದೇ ಅವನ ಭಾವನೆ. ಈ ಸೇವಾಮನೋಧರ್ಮವಿದ್ದರೆ ಮಾತ್ರ ಶಿವನೊಲಿಯುವನೆಂಬುದೇ ಬಸವಣ್ಣನವರ ಅಭಿಪ್ರಾಯ.

ಆದುದರಿಂದಲೇ ಮಾಡುವ ಕರ್ಮ – ಕೀರ್ತಿಕಾಮದಿಂದ ಕಳಂಕಿತವಾಗಿರಬಾರದು, ಅದು ಶಿವಾರ್ಪಣಭಾವ ಬದ್ಧವಾಗಿರಬೇಕು.

– ಸಂ. ಡಾ. ಎಲ್. ಬಸವರಾಜು

*(ಕೃಪೆ : ಬಸವ ವಚನಾಮೃತ)*







## ಧರ್ಮವಿಜಯ

ಎಂ.ಜಿ. ನಾಗರಾಜ್
221, 68ನೇ ಕ್ರಾಸ್, 5ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-560 010

ಅನ್ಯರ ನೋವು ನಲಿವುಗಳನ್ನು ಹಂಚಿಕೊಳ್ಳುವುದು ಮಾನವ ಧರ್ಮದ ನಡೆ, ಎನಿಸುತ್ತದೆ. *'ಧಾರಣಾತ್ ಧರ್ಮಃ'* ಎಂದಾಗ ಸಹಿಸಬಲ್ಲದ್ದು. ನಡೆಸಬಲ್ಲದ್ದು, ತಿಳಿಸಬಲ್ಲದ್ದು ಧರ್ಮ ಎಂಬ ಸೂಚ್ಯಾರ್ಥವಾಗುತ್ತದೆ. ಇದಕ್ಕೆ ದೃಷ್ಟಾಂತ ಹೀಗಿದೆ :

ಒಂದೂರಿನಲ್ಲಿ ಬಹಳ ಬುದ್ಧಿವಂತನೆನಿಸಿದ ವಿದ್ವಾಂಸನಿದ್ದ, ದೇಶಕೋಶಗಳನ್ನೆಲ್ಲ ತಿರುಗಿ, ವಿದ್ವಾಂಸರನ್ನು ವಾದದಲ್ಲಿ ಗೆದ್ದಿದ್ದ. ಸಂಪತ್ತು, ಗೌರವ, ಪ್ರಸಿದ್ಧಿ ಗಳಿಸಿ ಮರಳಿ ಊರಿಗೆ ಬಂದ (ಊರಿನವರು ಅವನ ಬಗ್ಗೆ ಗೌರವಾದರಗಳಿಂದ ನಡೆದುಕೊಳ್ಳುತ್ತಿದ್ದರು). ಒಂದು ದಿನ ಬೆಳಗ್ಗೆ ಅವನು ತನ್ನೂರಿನ ಬೆಳಗಿನ ಗಾಳಿ ಸೇವನೆಗೆ ಹೊರಟ. ಆ ಊರಿನ ರೈತನೊಬ್ಬ ಹೊಲಕ್ಕೆ ಎತ್ತುಗಳನ್ನು ಹೊಡೆದುಕೊಂಡು, ತನ್ನ ಪಾಡಿಗೆ ಹಾಡಿಕೊಂಡು ಹೋಗುತ್ತಿದ್ದ. ತಾನು ಎದುರು ಬಂದರೂ ನಮಿಸದೆ ರೈತ ಹಾಗೆಯೇ ಹೋಗುತ್ತಿದ್ದಾನಲ್ಲ ಎಂದು ವಿದ್ವಾಂಸ ಕಸಿವಿಸಿಗೊಂಡ. ರೈತ ನೋಡಿದರೂ ಹಾಗೇ ಹೋಗುತ್ತೀಯಲ್ಲ! ಎಷ್ಟು ಧಿಮಾಕು ನಿನಗೆ, ಎಂದ. ರೈತ, **ಸಂಧಾನ-ಸುಭಾಷಾ** ಎಂದ. ಮರುದಿನವೂ ರೈತ ಎದುರಾದ. ಹಾದಿಯಲ್ಲಿ ವಿದ್ವಾಂಸ ಕಲ್ಲು ಎಡವಿ ಹೆಬ್ಬೆಟ್ಟಿಗೆ ಗಾಯವಾಗಿ ರಕ್ತ ಒಸರ ತೊಡಗಿತು. ತಕ್ಷಣ ರೈತ ಸೊಪ್ಪೊಂದರ ರಸವನ್ನು ಗಾಯಕ್ಕೆ ಹಿಂಡಿದ. ತನ್ನ ತಲೆಗಿದ್ದ ವಸ್ತ್ರ ಹರಿದು ಬೆಟ್ಟಿಗೆ ಕಟ್ಟಿದ. **ಸಾವಧಾನ-ಸುಗಮನ** ಎಂದ. ಅದರ ಮರುದಿನ ಸಂಜೆ ಗೋಧೂಳಿ ಮೀರಿದ ಸಮಯ. ವಿದ್ವಾಂಸ ಪರ ಊರಿಗೆ ಹೋಗಿ ಸನ್ಮಾನ ಪಡೆದು ಮುತ್ತಿನಹಾರ ಧರಿಸಿಕೊಂಡು ಬರುತ್ತಿದ್ದ. ರೈತ ಅಂದು ತಡವಾಗಿ ನೇಗಿಲು ಹೊತ್ತು, ಎತ್ತು ಹೊಡೆದುಕೊಂಡು ಬರುತ್ತಿದ್ದ, ಕಳ್ಳನೊಬ್ಬ ಇದ್ದಕ್ಕಿದ್ದಂತೆ ವಿದ್ವಾಂಸನನ್ನು ಅಡ್ಡಗಟ್ಟಿ ಕೊರಳ ಮುತ್ತಿನಹಾರವನ್ನು ಕಿತ್ತುಕೊಂಡು ಓಡತೊಡಗಿದ. ಅದನ್ನು ಕಂಡ ರೈತ ಬೆನ್ನಟ್ಟಿ ಮುತ್ತಿನಹಾರ ಕಸಿದು ವಿದ್ವಾಂಸನಿಗೆ ತಂದುಕೊಟ್ಟ. **ಸಮಯಾವಧಾನ – ಸುಬಲ** ಎಂದು ನುಡಿದು ಸಾಗಿದ. ವಿದ್ವಾಂಸನಿಗೆ ಈ ಮೂರು ದಿನಗಳ ರೈತನ ಮಾತಿನಲ್ಲಿ ಸಕಾರ, ಸುಕಾರ ಶಬ್ದಗಳನ್ನು ಕೇಳಿ ಕುತೂಹಲ ಮೂಡಿತ್ತು. ರೈತನನ್ನು ನಿಲ್ಲಿಸಿ ಆ ಬಗ್ಗೆ ಕೇಳಿದ. ಸಕಾರ ಎಂದರೆ ಸಹವಾಗಿ ನಡೆಯುವುದು; ಸುಕಾರ ಎಂದರೆ ಒಳ್ಳೆಯ ಚರ್ಯೆ ತೋರುವುದು. ಒಳ್ಳೆಯ ಮಾತು, ಒಳ್ಳೆಯ ಎಚ್ಚರ, ಒಳ್ಳೆಯ ಬಲ ಧರ್ಮಕ್ಕೆ ಗೆಲುವು ತಂದುಕೊಡುತ್ತದೆ. ಧರ್ಮವಿಜಯ ಎನಿಸುತ್ತದೆ ಎಂದ. ವಿದ್ವಾಂಸನ ಗರ್ವ ಇಳಿದಿತ್ತು. ರೈತನ ಅರಿವಿಗೆ ನಮಿದ.

ಮಹಾಭಾರತದ ಶಾಂತಿಪರ್ವದಲ್ಲಿ ರಾಜಧರ್ಮಕ್ಕೆ ನಿಗದಿಗೊಳಿಸಿದ ವಿಜಯಗಳು ಧರ್ಮಾಯುಕ್ತ ವಿಜಯ, ಅರ್ಥವಿಜಯ, ಅಸುರ ವಿಜಯವೆಂದಿದೆ. ಕೌಟಿಲ್ಯನೂ ಹಾಗೆಯೇ (ಮೂರು ಬಗೆಯ ವಿಜಯ) ಹೇಳಿ ಅರ್ಥ ವಿಜಯವನ್ನು ಲೋಭ ವಿಜಯವೆಂದಿದ್ದಾನೆ. ಅಸುರ ವಿಜಯವೆಂದರೆ ಸೋತವ್ಯಕ್ತಿಯ ದೇಶಕೋಶ, ಆಸ್ತಿ, ಹೆಂಡತಿ ಮಕ್ಕಳನ್ನೆಲ್ಲ ವಶಪಡಿಸಿಕೊಂಡು ತೃಪ್ತಿಪಡುವುದು. ಇದರಲ್ಲಿ ಭಯೋತ್ಪಾದನೆ, ಲೂಟಿ, ಅತ್ಯಾಚಾರ, ಪಟ್ಟಣ ಸುಟ್ಟು ಸಂಸ್ಕೃತಿಯನ್ನು ನಾಶಗೊಳಿಸುವುದಿರುತ್ತದೆ. ಇದನ್ನು ಇಂದಿನ ಮತಾಂಧ ವಿಜಯಕ್ಕೆ ಹೋಲಿಸಬಹುದು; ಲೋಭವಿಜಯ ಅಥವಾ ಅರ್ಥವಿಜಯವೆಂದರೆ 'ಸೋತವನ ಹಾಗೂ ಸಂಪತ್ತನ್ನು ಪಡೆದು ತೃಪ್ತಿಪಡುವುದಾಗಿದೆ. ಇಂದು ಒತ್ತಡ ಸಮ್ಮತಿ, ಅನ್ಯರ ಸಂಪನ್ಮೂಲ ನಿಯಂತ್ರಣ, ತನ್ನ ಹಂಗಿನಲ್ಲಿ ಅನ್ಯ ದೇಶಗಳವರನ್ನು ಸದಾ ಇಟ್ಟುಕೊಳ್ಳುವುದು ಈ ವರ್ಗಕ್ಕೆ ಸೇರಿದ್ದು ಆಮಿಷದ ವಿಜಯ ಅವಕಾಶವಾದಿ ಅಥವಾ ವ್ಯವಹಾರ ಕಪಟ ವಿಜಯವೆಂದು ಇದನ್ನು ಹೇಳಬಹುದು.

ಧರ್ಮವಿಜಯವೆಂದರೆ ಗೆದ್ದ ಸಂಗತಿಯಿಂದ ತೃಪ್ತಿಪಡುವುದು ಎಂಬ ಸಾಮಾನ್ಯ ಅರ್ಥವಿದೆ. ಸೋತ ಶತ್ರುವನ್ನು ಗೌರವದಿಂದ ಕಂಡು ಸ್ನೇಹ ಸಾಮಂತನನ್ನಾಗಿ ಮಾಡಿಕೊಳ್ಳುವುದು. ಅಶೋಕ ಇದನ್ನೇ ಮೌಲ್ಯಗಳ ವಿಜಯವನ್ನಾಗಿಸಿದ, ಪ್ರಜ್ಞಾ ವಿಜಯವಾಗಿಸಿದ.

ಕಲಿಂಗವನ್ನು ಗೆದ್ದ ಮೇಲೆ ಯುದ್ಧದಲ್ಲಿ ಉಂಟಾಗಿದ್ದ ಲಕ್ಷಾಂತರ ಸಾವು ನೋವು ಅಶೋಕನ ಪ್ರಜ್ಞೆಯನ್ನು ಕೆಣಕಿತ್ತು. ಬದುಕಿ ಬಾಳುತ್ತಿದ್ದ ಅಲ್ಲಿನ ಜನತೆಗೆ ತಾನುಂಟುಮಾಡಿದ್ದ ಭಯೋತ್ಪಾದನೆಗೆ ಪಶ್ಚಾತ್ತಾಪದಿಂದ ಬೆಂದ. ತನ್ನ ಹದಿಮೂರನೆಯ ಷಾಬಾಸ್‌ಗಾರಿಯ ಬಂಡೆಗಲ್ ಶಾಸನದ ಪ್ರತಿಸಾಲಿನಲ್ಲಿ ಅನುಶೋಚನೆಯನ್ನು ನಾನಾ ಬಗೆಯಲ್ಲಿ ವ್ಯಕ್ತ ಮಾಡಿದ. ಕ್ರೂರ ಚಂಡಾಶೋಕ ಧರ್ಮಾಶೋಕನೆನಿಸಿದ. ಸವ್ರಭುತನ ಅಕ್ಷತಿ, ಸಂಯಮಂ ಸಮಚರಿಯಂ ರಭಸಿಯೇ' ಅಂದರೆ ಅಹಿಂಸೆ, ದುರಾಸೆಯಿಂದ ದೂರವಿರುವಂಥ ಸಂಯಮ. ಸಮದರ್ಶಿತ್ವವನ್ನು ಪಾಲಿಸುವುದು ಧರ್ಮವಿಜಯದ ಲಕ್ಷಣ ಎಂದ. ಆ ಶಬ್ದಕ್ಕೆ ಹೊಸ ಅರ್ಥ ನೀಡಿದ. ಇದುವೆ ಜೀವನಧರ್ಮ ಎಂದು ಪ್ರಚಾರ ಮಾಡಿ ಜಗತ್ತಿನ ಅನುಸರಣೆಗೆ ಇಟ್ಟ. ಪ್ರಭಾವಿಸುವ ನಿಜವಾದ ಧರ್ಮವಿಜಯ ಎಂದರೆ ಇದು.

## STATEMENT OF OWNERSHIP PARTICULARS ABOUT "SIDDAGANGA"

### Form IV (See Rule 5)

| | | |
|---|---|---|
| Place of Publication | : | **Siddaganga (Regd.)**<br>Siddaganga Mutt,<br>Tumkur District – 572 104 |
| Periodicity of its Publication | : | **Monthly** |
| Printer's Name | : | **Sri G. Nagasundar** |
| Whether Citizen of India | : | **Indian** |
| Address | : | **M/s. Geethanjali Graphics**<br>No. 5, M.S.R. Indl., Estate,<br>Gokul Extension,<br>Bangalore – 560 054. |
| Publisher's Name | : | **Sri H. B. Gangadharaiah** |
| Whether Citizen of India | : | **Indian** |
| Address | : | **Publisher**<br>Old Students Association,<br>siddaganga Mutt,<br>Tumkur District – 572 104 |
| Editor's Name | : | **H. V. Veerabhadraiah** |
| Nationality | : | Indian |
| Address | : | **Editor,** "Siddaganga"<br>Siddaganga Mutt,<br>Tumkur District – 572 104 |

I, H.B. Gangadharaiah hereby declare that the particulars given above are true to the best of my knowledge and belief.

Bangalore

Date : 1-3-2003

**(H.B. Gangadharaiah)**

Signature of Publisher








# ಅಂಬಿಗರ ಚೌಡಯ್ಯನ ಒಂದು ವಚನ : ಚಿಂತನೆ


– ಪಂಡಿತ ಚನ್ನಪ ಎರೆಸೀಮೆ

ನಂ. ೫೯೭, ಎರಡನೇ ಅಡ್ಡರಸ್ತೆ,

೭ನೇ ಮುಖ್ಯರಸ್ತೆ, ವಿಜಯನಗರ,

ಬೆಂಗಳೂರು – ೫೬೦ ೦೪೦.


*ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ*
*ಕೊನೆಗೆ ಅವನ ಮನೆಯಲಿ ಉಣಬಾರದೆಂದು*
*ಅಕ್ಕಿ ಕಣಕವ ತಕ್ಕೊಂಡು ಹೋಗುವ ಗುರುವಿನ ಕಂಡು*
*ಕೆಡವಿ ಹಾಕಿ ಮೂಗನು ಕೊಯ್ದು*
*ಇಟ್ಟಿಗೆಯ ಕಲ್ಲಿಂದ ತಿಕ್ಕಿ, ಸಾಸಿವೆಯ ಹಿಟ್ಟನ್ನು ತಳೆದು*
*ಲಿಂಬಿಯ ಹುಳಿಯನ್ನು ಹಿಂಡಿ*
*ಪಡುವ ಗಾಳಿಗೆ ಹಿಡಿಯೆಂದಾತ ನಮ್ಮ*
*ಅಂಬಿಗರ ಚೌಡಯ್ಯ !*

– ಅಂಬಿಗರ ಚೌಡಯ್ಯ



ಸಮಾಜ ವ್ಯವಸ್ಥೆಯಲ್ಲಿ ವಿವಿಧ ವೃತ್ತಿಗಳು ಅನಿವಾರ್ಯ. ಅವು ಒಂದಕ್ಕೊಂದು ಪೂರಕಗಳು. ವೃತ್ತಿಗಳ ಮೇಲಿಂದ ಜನಾಂಗವನ್ನು ವಿಂಗಡಿಸಿ, ಅವುಗಳಲ್ಲಿ ತರತಮ ಭಾವವನ್ನು ಉಂಟುಮಾಡಿ, ಅನೇಕ ಜಾತಿಗಳನ್ನು ಕಲ್ಪಿಸಬಾರದು. ಆ ಜಾತಿ ಜಾತಿಗಳ ಮಧ್ಯದಲ್ಲಿ ಕಂದಕಗಳನ್ನು ಸೃಷ್ಟಿಸಬಾರದು. ಹಾಗೆ ಸೃಷ್ಟಿಸಿದರೆ, ಜನಾಂಗ ಛಿದ್ರ-ಛಿದ್ರವಾಗಿ ಜಾತಿ- ಕುಲ-ಪಂಗಡ ಭಾವ ಬಲಿತು, ದ್ವೇಷಾಸೂಯೆಗಳ ಹೊಗೆ ಹೊರಹೊಮ್ಮಿ ರಾಷ್ಟ್ರಶಕ್ತಿ ನಷ್ಟವಾಗಿ ಹೋಗುತ್ತದೆಂಬುದನ್ನು ಭಾರತ ಇತಿಹಾಸದಲ್ಲಿ ಎಲ್ಲರೂ ಕಂಡುಂಡ ಕಹಿಯ ಕಥೆಯಾಗಿದೆ. ಅನಾದಿ ಕಾಲದಿಂದಲೂ ಭಾರತದ ಕ್ಷಾತ್ರಶಕ್ತಿ ನಷ್ಟವಾಗುತ್ತಾ ಬಂದು ಕೊನೆಗೆ ಪರಕೀಯರ ಕಪಿಮುಷ್ಟಿಗೆ ಸಿಕ್ಕು ಜರ್ಜರಿತಗೊಂಡುದೂ ಕೂಡ ಆ ವೈಜ್ಞಾನಿಕ ವರ್ಗ-ವರ್ಣ-ಕುಲ-ಜಾತಿ-ಪಂಗಡ ಕಲ್ಪನೆಯ ತರತಮಭಾವದ ಕಾರಣವಾಗಿಯೇ ಎಂಬುದು ಕಟುಸತ್ಯ ವಿಷಯವೇ. ಭಾರತೀಯರನ್ನೆಲ್ಲ ಒಂದು ತತ್ತ್ವ ಸಿದ್ಧಾಂತದಡಿಗೆ ಸಮತೆಯ ಆಧಾರದ ಮೇಲೆ ಒಗ್ಗೂಡಿಸುವ ಕಾರ್ಯಕ್ಕೆ ಕೈಯಿಕ್ಕಿದವರಲ್ಲಿ ಬಸವಣ್ಣನವರಿಗೆ ಪ್ರಥಮ ಪ್ರಾಶಸ್ತ್ಯ ದೊರೆಯಬೇಕೆನ್ನುವುದಕ್ಕೆ ಅವರ ವಚನಗಳು ಸಾಕ್ಷೀಭೂತವಾಗಿದೆ. ಅವರು ಭಾರತೀಯ ತತ್ತ್ವಜ್ಞರಲ್ಲಿ ತತ್ತ್ವಜ್ಞರು. ಸಮಾಜವಾದದಲ್ಲಿ ಶ್ರೇಷ್ಠ ಸಮಾಜವಾದಿಗಳು, ರಾಷ್ಟ್ರೀಯ ಮುತ್ಸದ್ದಿಗಳಲ್ಲಿ ಮುತ್ಸದ್ಧಿಗಳು. ಅರ್ಥಶಾಸ್ತ್ರದಲ್ಲಿ ಮಹಾತಜ್ಞರು. ತನ್ಮಯತೆಯಿಂದ, ಶ್ರದ್ಧಾಭಕ್ತಿ ವಿಶ್ವಾಸಗಳಿಂದ ಯಾವಕ್ರಿಯೆ ಮಾಡಿದರೂ ಅದು ಯೋಗದ ಮಟ್ಟದ್ದೆಂದು ಸಾರಿದವರು.[೧] ಅವರ ಈ ಮಹಾಕ್ರಾಂತಿಯಲ್ಲಿ ವ್ಯಕ್ತವಾಗುವ ಮುಖ್ಯಾಂಶಗಳಲ್ಲಿ ಧರ್ಮದಿಂದ, ಧರ್ಮಗ್ರಂಥಗಳಿಂದ, ಧಾರ್ಮಿಕ ಸ್ಥಲಗಳಿಂದ ವಂಚಿತರಾಗಿ, ಪುರೋಹಿತಶಾಹಿಯ ಕಪಿಮುಷ್ಟಿಯಲ್ಲಿ ಸಿಕ್ಕು ಕೀಳರಿಮೆಯ ಅತೃಪ್ತ ವಿವಿಧ ಕುಲದವರನ್ನು ಕಸುಬುದಾರರನ್ನು, ಅಸ್ಪೃಶ್ಯಾದಿ ಅಭಿಶಾಪಗಿಂದ ಅಭಿಭೂತರಾದವರನ್ನು ಹೇಗೆ ಮೇಲಕ್ಕೆತ್ತಬೇಕು? ಏನೂ ಗೊತ್ತಿಲ್ಲದ ಅವರ ಅಪಾರ ಕ್ರಿಯಾಶಕ್ತಿಯನ್ನು ಕ್ರಿಯಾ ಯೋಗದ ಮೂಲಕ ಹೇಗೆ ರಾಷ್ಟ್ರೀಯ ಉತ್ಕರ್ಷಕ್ಕೆ ಪೂರಕಗೊಳಿಸ

*೧. "ಯೋಗಃ ಕರ್ಮಸು ಕೌಶಲಂ". ಭಗವದ್ಗೀತೆಯಲ್ಲಿ ಈ ನುಡಿ ನಮಗೆ ಸಿಕ್ಕುತ್ತಿದ್ದರೂ. ಈ ಮಾತಿನ ಅರ್ಥ ಸಮಾಜದಲ್ಲಿ ರೂಢಮೂಲವಾಗಿದೆ. ಕ್ರಿಯೆಯಲ್ಲಿ ತಾರತಮ್ಯ ಮತ್ತು ಮೇಲು ಕೀಳುಗಳನ್ನು ಭಾರತ ಬೆಳೆಸಿಕೊಂಡು ಬಂದದು ಕಂಡುಬರುತ್ತಿದೆ. ಪ್ರಪಂಚದ ಬಹುದೊಡ್ಡ ಧರ್ಮಗಳಾದ ಇಸ್ಲಾಂ, ಕ್ರಿಶ್ಚಿಯನ್ ಮೊದಲಾದ ಧರ್ಮಗಳಲ್ಲಿ ಈ ತಾರತಮ್ಯ ಕಿತ್ತು ಹಾಕಿದ ಕಾರಣ ಅವು ಪ್ರಪಂಚ ವ್ಯಾಪ್ತಿಯಲ್ಲಿ ಹರಡಲು ಕಾರಣವಾಯಿ ತೆಂಬುದು ಲಕ್ಷೀಕರಿಸಬೇಕಾದುದು ಮುಖ್ಯ.*

ಬೇಕು? ಎಂದು ಆಳವಾಗಿ ಯೋಚಿಸಿದ್ದನ್ನು ಕಾಣಬಹುದು. ಆದುದರಿಂದ ಕುಲ-ಜಾತಿ-ಮತ-ವರ್ಣ ಪದ್ಧತಿಯ ಮೇಲೆ ಪ್ರಬಲ ದಾಳಿಯನ್ನೇ ಮಾಡಿದರು.[2] ಈ ದಾಳಿಯಲ್ಲಿ ಅವರು ಹಿಡಿದ ಅಸ್ತ್ರ ''ಷಟ್‌ಸ್ಥಲ ಸಿದ್ಧಾಂತ''. ಪ್ರಾಚೀನವಾದ ಈ ಆಲಗಿನ ತುಕ್ಕುತೆಗೆದು ಮಸೆದು-ಪಳಗಿಸಿ- ಹಿಡಿದು ಝಳಪಿಸಿ, ಕಡುಗಲಿಯಾಗಿ ಜಂಬೂದ್ವೀಪ ನವಖಂಡ ಪೃಥ್ವಿಯಲ್ಲಿನ ಎಲ್ಲ ತತ್ತ್ವಜ್ಞರ ಗಮನ ಸೆಳೆಯಲು ಪ್ರಯತ್ನಿಸಿದ್ದನ್ನು ಕಾಣಬಹುದು.[3]

ಬಸವಣ್ಣನವರ ಈ ಕ್ರಾಂತಿಯ ಕಾರಣವಾಗಿ ಅನೇಕ ಕಾಯಕ ಮಗ್ನ ವಿಚಾರವಾದಿಗಳಿಗೆ ಆತ್ಮಪ್ರತ್ಯಕ ತುಂಬಿತು. ಅವರ ಭಕ್ತಿಜೀವನಕ್ಕೆ ಬಣ್ಣವೇರಿತು. ತಮಗೆ ಎಂದೂ ಯಾರೂ ಹೇಳದಿದ್ದ ಧರ್ಮಶಹಸ್ಯದ ಈ ಧೈರ್ಯದ ನುಡಿಗಳಿಂದ ಉತ್ತೇಜಿತರಾದರು. ಅವರಲ್ಲಿ ಅಂಬಿಗ ವೃತ್ತಿಯಲ್ಲಿ ಜೀವನ ಸಾಗಿಸುತ್ತಿದ್ದ ಅಂಬಿಗರ ಚೌಡಯ್ಯ ಶರಣರೂ ಒಬ್ಬರು. ಈಗಿನ ಧಾರವಾಡ ಜಿಲ್ಲೆಯ ಪೂರ್ವಗಡಿಯಲ್ಲಿ ಹರಿಯುತ್ತಿರುವ ತುಂಗಭದ್ರಾ ನದಿಯ ದಡದಲ್ಲಿರುವ 'ಚೌಡದಾನಪುರ' ಚೌಡಯ್ಯನವರ ಕಾಯಕಕ್ಕೆ ಆಶ್ರಯವಾಗಿದ್ದ ಊರು. ತುಂಗಭದ್ರೆಯ ಒಂದು ದಡದಿಂದ ಇನ್ನೊಂದು ದಡಕ್ಕೆ ಹರಿಗೋಲಿನಲ್ಲಿ ಜನರನ್ನು ದಾಟಿಸುವ 'ಅಂಬಿಗ ವೃತ್ತಿ'ಯೇ ಇವನು ಅನುಸರಿಸುತ್ತಿದ್ದ ಕಾಯಕ. ಕೆಳಸ್ತರದ ಕಾರ್ಮಿಕ ವರ್ಗದಲ್ಲಿ ಉದಯಗೊಂಡ ಈ ಕಾಯಕ ಸದ್ಭಾವಿಗೆ ಬಸವತತ್ತ್ವಾನುಯಾಮಿಯಾದ ಮಹಾವಿದ್ವಾಂಸ ಶಿವದೇವಯತಿಯಿಂದ ಶಿವಲಿಂಗದೀಕ್ಷೆಯಾಗಿತ್ತು. ವೀರಶೈವ ತತ್ತ್ವಾನುಷ್ಠಾನದಲ್ಲಿ ಜೀವಿಸುತ್ತಿದ್ದ ಈ ಮಹಾಶರಣನ ಗುಣ ಸ್ವಭಾವಗಳು, ಅನುಭಾವ ಆಲೋಚನೆಗಳು. ಅಭಿವ್ಯಕ್ತಿಗಳು ಇವನೊಬ್ಬ ಕಟ್ಟುಗ್ರದ ನಿಷ್ಠುರ ಶರಣನೆಂಬುದಾಗಿ ಸ್ಪಷ್ಟಪಡಿಸಿವೆ. ಈ ಕಾರಣವಾಗಿ ಇವನು ಬಹುದೊಡ್ಡ ವಚನಕಾರನೆನ್ನಿಸದಿದ್ದರೂ, ಬಹು ಜನಪ್ರಿಯ ವಚನಕಾರನೆಂಬ ಖ್ಯಾತಿಗಳಿಸಿವೆ. ಜನತೆಯಲ್ಲನ ಮೂಢ ನಂಬಿಕೆ ಅಜ್ಞಾನ ಅಪಾಮಾರ್ಗಗಳನ್ನು ಯಾವ ಅಳುಕು- ಅಂಜಿಕೆಗಳಿಲ್ಲದೆ ಕಠಿಣ ವಾಕ್ ಪ್ರಹಾರ ಮಾಡಿ ಖಂಡಿಸಿ ಎಚ್ಚರಗೊಳಿಸುವ ಇವನು ಜನತೆಯನ್ನು ಆತ್ಮ ಶೋಧನೆಗೆ ತೊಡಗುವಂತೆ ಮಾಡುವ ಓರ್ವ ಶ್ರೇಷ್ಠ ಸಮಾಜ ಸುಧಾರಕನಾಗಿಯೇ ಕಾಣುತ್ತಾನೆ. ಒಮ್ಮೊಮ್ಮೆ ಇವನ ಸಾಮಾಜಿಕ ವಿಡಂಬನೆ ಆಕ್ರೋಶಾದಿಗಳು ಆತ್ಮಶೋಧನೆಯಾಗಿಯೂ ಅಭಿವ್ಯಕ್ತವಾಗಿವೆ.

ಆದರೆ ಲೋಕದಲ್ಲಿ ಕೆಲವು ಪ್ರಬುದ್ಧ ಚೇತನಗಳು ಸತ್ಯಕ್ಕೆ, ಸದಾಚಾರಕ್ಕೆ, ಸದ್ವೃತ್ತಿಗೆ, ಸದ್ವ್ಯವಹಾರಕ್ಕೆ ಭಂಗ ಬರತಕ್ಕ ಸಂದಿಗ್ಧ ಸಮಯದಲ್ಲಿ ತಡೆದುಕೊಳ್ಳಲಾಗದೆ ಸಾತ್ವಿಕ-ಕೋಪ ಪ್ರಕಟಿಸುವಾಗ ಕಾಠಿಣ್ಯಪೂರ್ಣ ನಿಷ್ಠುರ ನುಡಿಗಳನ್ನು ಬಳಸಿರುವುದೂ ಉಂಟು. ಬಸವಣ್ಣನವರಂಥ ಪ್ರಾಜ್ಞರೂ ಕೂಡ ಇದಕ್ಕೆ ಹೊರತಲ್ಲ. ''ಆರು ಮುನಿದು ಎಮ್ಮನೇನು ಮಾಡುವರು ! ಊರು ಮುನಿದು ಎಮ್ಮನೆಂತು ಮಾಡುವುದು. ಎಮ್ಮ ಕೂಸಿಗೆ ಕುನ್ನಿಯ ಕೊಡಬೇಡ ! ಎಮ್ಮ ಸೊಣಗಂಗೆ ತಳಿಗೆಯನ್ನಿಕ್ಕಬೇಡ ! ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ?'' (ಬ. ವ. ೭೫೩) ''ಕೋಣನ ಹೇರಿಂಗೆ ಕುನ್ನಿ ಬುಸುಗುಡುತ್ತಬಡೆವಂತೆ''. (ಬ. ವ. ೬೬೨) ''ಈಶ್ವರ ಸದ್ಭಾವೇ ಕಿ ಪ್ರಮಾಣಂ'' ಎಂಬ ಮೀಮಾಂಸಕನ ಮೂಗಿನ ಕೊನೆಯನು ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಃ ಪಾತ್ ಸಬಾಹು ಭ್ಯಾಂ ಧಮತಿ ಸಂಪತ್ರೈಃ ದ್ಯಾವಾ ಭೂಮೀ ಜನಯನ್ ದೇವ ಏಕಃ – ಎಂಬ ಸುರಗಿಯಲಿರಿದು ವೈಶೇಷಿಕವೆಂಬ ಇಟ್ಟಿಗೆಯಲೊರಸಿ, ಕೂಡಲ ಸಂಗಯ್ಯನೆಂಬ ಕನ್ನಡಿಯ ತೋರುವೆನು''. (ಬ. ವ. ೭೪೭) ಇಲ್ಲಿನ ಬಸವಣ್ಣನವರ ಬುಗಿಲೆದ್ದ ಸಾತ್ವಿಕ ಕೋಪ ಅವರ ಬಾಯಿಂದ ಕುನ್ನಿ-ಸೊಣಗ-ಶ್ವಾನ-ಸುರಿಗಿಯಲಿರಿದು-ಇಟ್ಟಿಗೆಯಲೊರಸಿ ... ಇತ್ಯಾದಿ ಅತಿ ನಿಷ್ಠುರ ನುಡಿಗಳನ್ನಾಡಿಸಿದೆ. ಆದರೆ ಚೌಡಯ್ಯನಂತ ಕೆಳಸ್ತರದ ವರ್ಗದಲ್ಲಿ ಹುಟ್ಟಿ ಬೆಳೆದ ಓರ್ವ ಕಾಯಕ ಜೀವಿಯ ಬಾಯಿಂದ ''ಹೊಲೆಯ, ಮಾದಿಗ, ಮೂಳ, ಖೊಟ್ಟಿಮೂಳ, ಎಡ ಪಾದರಕ್ಷೆ, ಕೆರ, ಪಾದುಕೆಯಿಂದ ಹೊಡೆ, ಒದೆ, ತುಳಿ, ನಾಯಿ, ಸೂಕರ, ಕೆಡವಿಹಾಕಿ ಮೂಗಕೊಯ್ಯಿ....'' ಇತ್ಯಾದಿ ಅನೇಕಾನೇಕ ನೈಷ್ಠುರಪೂರ್ಣ ಮಾತುಗಳ ಸರಮಾಲೆಯೇ ಹರಿದಿದೆ. ಯಾವ ವಚನಕಾರರೂ ಪ್ರಯೋಗಿಸಿದ ಇಷ್ಟೊಂದು ಕಟ್ಟುಗ್ರ ನುಡಿಗಳನ್ನು ಆಡಿದ ಚೌಡಯ್ಯನವರು, ಹರಿಗೋಲಿನಲ್ಲಿ ಭಕ್ತಜನತೆಯನ್ನು ಆಚೆಯ ದಡ ಮುಟ್ಟಿಸಲೂ ಬಲ್ಲವರು; ಆಚಾರ ವಿಚಾರಹೀನರನ್ನು ನಡುನದಿಯಲ್ಲಿ ಮುಳುಗಿಸಲೂ ಬಲ್ಲವರು, ಎನ್ನುವಂತೆ ಮಾಡಿವೆ. ಪ್ರಕೃತ ಅವರ ಕೆಳಗಿನ ಒಂದು ನಿಷ್ಠುರ ವಚನವನ್ನು ಕುರಿತು ಸಮಾಲೋಚಿಸುವುದು ಲೇಖನದ ಉದ್ದೇಶವಾಗಿದೆ :

*''ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ ಕೊನೆಗೆ ಅವನ ಮನೆಯಲ್ಲಿ ಉಣಬಾರದೆಂದು ಅಕ್ಕಿ ಕಣಕದ ತಕ್ಕೊಂಡು ಹೋಗುವ ಗುರುವ ಕಂಡೊಡೆ ಕೆಡವಿಹಾಕಿ, ಮೂಗನೆ ಕೊಯ್ದು, ಇಟ್ಟಿಗೆಯಿಂದ ತಿಕ್ಕಿ, ಸಾಸಿವೆ ಹಿಟ್ಟನ್ನು ತಳೆದು, ಲಿಂಬೆಹುಳಿಯನ್ನು ಹಿಂಡಿ ಪಡವ ಗಾಳಿಗೆ ಹಿಡಿಯೆಂದಾದ ನಮ್ಮ ಅಂಬಿಗರ ಚೌಡಯ್ಯ''*

ವೀರಶೈವ ಸಿದ್ಧಾಂತಗಳಲ್ಲಿ ಮನುಷ್ಯನು ದೀಕ್ಷಾಪೂರ್ವದಲ್ಲಿ ಯಾವುದೇ ಮತ, ಪಂಥ, ಕುಲ, ಜಾತಿ, ಧರ್ಮದವನಾಗಿರಲಿ ವೀರಶೈವ ಲಿಂಗದೀಕ್ಷಾ ಸಂಸ್ಕಾರದಿಂದ ಉಂಟಾಗುವ ಜನ್ಮವನ್ನು ಅಪ್ರಾಕೃತ ಜನ್ಮವೆಂದೂ ಕರೆಯಲಾಗುತ್ತಿದೆ. ಪ್ರಕೃತಿ ಸಂಬಂಧವಾದ ಮಾಂಸಪಿಂಡ, ಭೂತಕಾಯ, ವಾಯು, ಪ್ರಾಣ ಮೊದಲಾದವು ಈ ದೀಕ್ಷಾಸಂಸ್ಕಾರದಿಂದ ಮಂತ್ರಪಿಂಡ, ಪ್ರಸಾದಕಾಯ, ಲಿಂಗ, ಪ್ರಾಣಗಳಾಗುತ್ತವೆಂದು ನಂಬಿಕೆ. ಹೀಗಾದಾಗಲೇ ಅಂಗಪದ ವಾಚ್ಯ (ಶುದ್ಧ ಜೀವ)ನೆನಿಸುವನು. ಈ ಸಂಸ್ಕಾರಗೊಂಡವನ ಸಾಮಾನ್ಯ ಧರ್ಮವೇ ವೀರಶೈವ ಧಾರ್ಮಿಕ ಜಾತಿ. ಈ ಜಾತಿ ಮತ ಸಂಸ್ಕಾರಜನ್ಯವಾದದ್ದು. ವರ್ಣಸಂಸ್ಕಾರ ಜನ್ಯವಾದದ್ದಲ್ಲ. ದೀಕ್ಷಾರೂಪವಾದ ಗುರುವಿನ ಅನುಗ್ರಹವಾದ ಮೇಲೆ ಗುರುಶಿಷ್ಯರಿಬ್ಬರೂ ಸಮಾನರಾಗುತ್ತಾರೆ. ಅವರೀರ್ವರೂ ಸಮರಸ ಸದ್ಭಾವ ಪೂರ್ವಕ ತೀರ್ಥ-ಪ್ರಸಾದ ಸ್ವೀಕಾರ ಮಾಡಬೇಕು. ಹಾಗಲ್ಲದೆ ಶಿಷ್ಯನ ದೀಕ್ಷಾಂಗಪೂರ್ವದ ಕುಲಜಾತಿಯನ್ನು ಮನಸ್ಸಿನಲ್ಲಿಟ್ಟುಕೊಂಡು, ಅಲ್ಲಿ ಪ್ರಸಾದವನ್ನು ಕೊಟ್ಟುಕೊಳ್ಳದೆ ಗೋದಿಯ ಹಿಟ್ಟು, ಅಕ್ಕಿ, ಬೇಳೆ ಮೊದಲಾದ ಪರಿಕರ ತೆಗೆದುಕೊಂಡು ಹೋಗುವ ಗುರುವರ್ಗವನ್ನೇ ಜಡಿದು-ಜಂಕಿಸಿ ನುಡಿದಿದ್ದಾನೆ ಚೌಡಯ್ಯ ಶರಣ. ಇಂಥ ಗುರುಗಳ ಬಗೆಗೆ ಚೆನ್ನಬಸವಣ್ಣನವರೂ ಕೂಡ 'ಲಿಂಗವ ಮಾರಿ ಕೊಂಡುಂಬ ಭಂಗಗಾರರು' ಎಂದು ಬಹು ಮಾರ್ಮಿಕವಾಗಿ ಛೇಡಿಸಿರುವುದನ್ನು ಕಾಣಬಹುದಾಗಿದೆ. ಚನ್ನಬಸವಣ್ಣನವರ ಮಾತುಗಳೇ ಅಂಬಿಗರ ಚೌಡಯ್ಯನವರ ಈ ವಚನಕ್ಕೆ ಮೂಲವೆಂದೂ ಹೇಳಬಹುದು.4

*ಕುಲಹೀನ ಶಿಷ್ಯಂಗೆ ಅನುಗ್ರಹವ ಕೊಟ್ಟು ತನ್ನ ಪ್ರಾಣಲಿಂಗವ ನಿಕ್ಷೇಪಿಸಿ, ಕರ್ಣದಲ್ಲಿ ಮಂತ್ರವ ಹೇಳಿ, ಆ ಶ್ರೀಗುರು ಬಂದು ಆ ಶಿಷ್ಯನ ಮನೆಯ ಹೊಗಲೊಲ್ಲದೆ, ಅಕ್ಕಿ ತುಪ್ಪವನೀಸಿಕೊಂಬುವನ ಕೇಡಿಂಗೆ ಇನ್ನೇವೆನಯ್ಯಾ! ತನ್ನ ಪ್ರಾಣಲಿಂಗವ ಕೊಟ್ಟು ತಾ ಹುಗೆನೆಂಬ ವ್ರತಗೇಡಿಯನಿನ್ನೇನೆನ ಬಹುದಯ್ಯಾ ! ಅವನ ಧನಕ್ಕೆ ತಂದೆಯಾದನಲ್ಲದೆ ಅವನಿಗೆ ತಂದೆಯಾದುದಿಲ್ಲ. ಇದು ಕಾರಣ ಕೂಡಲ ಚನ್ನಸಂಗಯ್ಯಾ, ಆ ಲಿಂಗವ ಮಾರಿಕೊಂಡುಂಬ ಭಂಗಗಾರ ಕೆಟ್ಟ ಕೇಡನೇನೆಂಬೆನಯ್ಯಾ!''*

೨. i) ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೇಸರಗೊಂಡನಾದರೆ ನಿಮ್ಮಾಣೆ, ನಿಮ್ಮ ಪುರಾತನರಾಣೆ ! ತಲೆದಂಡ ತಲೆದಂಡ ಕೂ.ಸಂ. ದೇವಾ. ಭಕ್ತರ ಕುಲವನರಸಿದರೆ, ನಿಮ್ಮ ರಾಣೇಸದಾಣೆ (ಬ. ವ. ೪೫೩).

ii) ಸೆಟ್ಟಿಯೆಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹಾರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದರೆ, ಕೂಡಲ ಸಂಗಮದೇವಯ್ಯ ನಗುವನಯ್ಯ. (ಬ.ವ. ೩೪೪)

iii) ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸಿದರಯ್ಯ, ಕಕ್ಕಯ್ಯ ನೊಕ್ಕದನಿಕ್ಕ; ದಾಸಯ್ಯ ಶಿವದಾನವೆರೆಯ : ..... ಚೆನ್ನಯ್ಯನೆನ್ನುವ ಮನ್ನಿಸ : ...... ಕೂ. ಸಂ. ದೇವಾ ಶಿವಧೋ ! ಶಿವಧೋ !!

೩. i) ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ : ಕೊಲುವೆನೆಂಬ ಭಾಷೆ ದೇವನದು; ಗೆಲುವೆನೆಂಬ ಭಾಷೆ ಭಕ್ತನದು; ಸತ್ಯವೆಂಬ ಕೂರಲಗನೆ ಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲ ಸಂಗಮದೇವಾ, (ಬ. ವ. ೬೭೭)

ii) ಮುನ್ನಿನ ಕಲಿ ವೀರಧೀರರು ಕಾದಿದ ರಣಗಳನು ಪರಿಪರಿಯಲಿ ಬಣ್ಣಿಸಿ ಪೇಳಬಹುದಲ್ಲದೆ .... (ಬ. ವ. ೯೦೮ನ್ನು ನೋಡಿ ಅರ್ಥೈಸಿಕೊಳ್ಳಿ). (ಈ ಎರಡೂ ವಚನಗಳೂ ಧ್ವನಿಪೂರ್ಣ).

4. ಶ್ರೀ ಚನ್ನಬಸವಣ್ಣನವರು ಈ ಸಂಬಂಧದಲ್ಲಿ ಅನೇಕ ಬಗೆಯಲ್ಲಿ ವಿವರಿಸುವುದನ್ನು ಕಾಣಬಹುದು.

೧) ತನ್ನ ಮನೆಯ ಹೊಗದ ಗುರುವನರಸಿಕೊಂಡು ಹೋಹಾತ ಶಿಷ್ಯನಲ್ಲ; ತಾ ಹೊಗದ ಮನೆಯವರಿಗೆ ಕಾರುಣ್ಯ ಉಪದೇಶವ ಮಾಡುವಾತ ಗುರುವಲ್ಲ. ಅಂಗವ ಮಾರಿ ಮನೆಯವರಿಗೆ ಶಿಷ್ಯ ಗುರುದ್ರೋಹಿ; ಲಿಂಗವ ಮಾಡಿಕೊಡುಂಬ ಗುರು ಶಿವದ್ರೋಹಿ ... ಈ ಗುರುಶಿಷ್ಯರಿಬ್ಬರ ಭಕ್ತರೆಂದವರ ಕೂಡಲಚನ್ನಸಂಗಯ್ಯ ನಾಯಕನರಕದಲ್ಲಿಕ್ಕುವ.

೨) ಭೂತ ಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದ ಬಳಿಕ ಆ ಶಿಷ್ಯನೇ ಜಂಗಮನಾಗಿ ಗುರುವಿನ ಮಠಕ್ಕೆ ನಡೆದು ಬಂದಡೆ, ಗುರುವೆಂಬ ಹಮ್ಮಿಲ್ಲದೆ ಎನ್ನ ಪರಮಗುರುವೆಂದು ಪಾದಾರ್ಚನೆಯ ಮಾಡುವುದು ಆಚಾರ. ನಾಚಿಮಾಡದಿರ್ದಡೆ ನಾಯಕನರಕ, ಆ ಜಂಗಮ ಶಂಕೆಯಿಲ್ಲದೆ ಪಾದಾರ್ಚನೆಯ ಮಾಡಿಸಿಕೊಂಬುದೇ ಕರ್ತೃತ್ವ; ಶಂಕೆಗೊಂಡಡೆ ಮಹಾಪಾತಕ. ಹೀಗಲ್ಲದೆ ಗುರುವೆಂಬ ಹಮ್ಮು, ಶಿಷ್ಯನೆಂಬ ಶಂಕೆ ಉಳ್ಳನ್ನಬರ ರೌರವನರಕದಲ್ಲಿಕ್ಕುವ ಕೂಡಲಸಂಗಮದೇವ.

ಭಾವೋದ್ವೇಗದ ತೀವ್ರತೆಯ ದೃಷ್ಟಿಯಿಂದ ಚೌಡಯ್ಯನವರ ವಚನವನ್ನೂ ಚೆನ್ನಬಸವಣ್ಣನವರ ವಚನವನ್ನು ತೂಗಿ ನೋಡಿದಾಗ ಚೌಡಯ್ಯನವರ ಬಗೆಗೆ ನಾವು ಹೇಳಿರುವ ರೀತಿ ಹೇಗಾದರೂ ಇರಲಿ; ಹೇಳಿರುವುದು ಸತ್ಯವೇ ಅಲ್ಲವೇ ! ಎಂದು ಸಮಾಧಾನಪಟ್ಟುಕೊಳ್ಳಬೇಕಾಗುತ್ತದೆ. 'ನ್ಯಾಯ ನಿಷ್ಠುರಿ ಶರಣನಾರಿಗೂ ಅಂಜುವವನಲ್ಲ' ಮತ್ತು 'ನ್ಯಾಯ ನಿಷ್ಠುರಿದಯಾದಾಕ್ಷಿಣ್ಯಪರ ನಾನಲ್ಲವಯ್ಯ' ... ಇತ್ಯಾದಿಯಾಗಿ ಹೇಳುವ ಬಸವಣ್ಣನವರ ಮಾತುಗಳನ್ನು ಚೌಡಯ್ಯನವರಿಗೂ ಅನ್ವಯಿಸಿಕೊಳ್ಳಬೇಕಾಗುತ್ತದೆ. ಇದೇನೇ ಇರಲಿ, ವಚನ ವಾಙ್ಮಯದಲ್ಲಿ ಮತದೊಡನೆ ವರ್ಣಾಶ್ರಮ ಧರ್ಮವನ್ನು ಶರಣರು ಅಂಗೀಕರಿಸುವುದೇ ಇಲ್ಲ. ಇಷ್ಟೇ ಅಲ್ಲದೆ ಲಿಂಗಾಂಗ ಸಾಮರಸ್ಯ ರೂಪವಾದ ಮೋಕ್ಷಕ್ಕೆ ಮತ ಧರ್ಮವೇ ಮುಖ್ಯವಲ್ಲದ ತರತಮ ಭಾವದಿಂದ ಭೇವ ಕಲ್ಪಿಸುವ ವರ್ಣಾಶ್ರಮ ಧರ್ಮದ ಉಪಯೋಗವಿಲ್ಲವೆಂಬುದು ಹೆಜ್ಜೆ ಹೆಜ್ಜೆಗೂ ವ್ಯಕ್ತಪಟ್ಟಿದೆ. ವರ್ಣ-ಆಶ್ರಮಗಳಿಗತೀತವಾದ ಮತಧರ್ಮವೇ ವೀರಶೈವದ ಶುದ್ಧ ಸಂಪ್ರದಾಯವೆಂದು ವಚನಗಳ ಸಂದೇಶ. ಕಾಯಕವಾವುದೇ ಇರಲಿ, ಪೂರ್ವಾಶ್ರಯ ಎಂತೇ ಇರಲಿ, ಲಿಂಗ ಸಂಸ್ಕಾರ ಮೂಲಕವಾದ ದೀಕ್ಷೆಗೊಂಡವರೆಲ್ಲ ಸಮಾನರೆಂದು ಸಾರುವುದರ ಮೂಲಕವೇ ಅವರು ಹಿಂದೂ ಸಮಾಜದಲ್ಲಿಯ ಅನೇಕ ಭೇದಗಳ ಭದ್ರಕೋಟೆಯನ್ನು ಒಡೆದುಹಾಕಿ ಒಂದು ಸುಂದರ ಸಮಾಜದ ಜನಾಂಗ ಕಟ್ಟಲು ಪ್ರಯತ್ನಪಟ್ಟಿರುವುದನ್ನು ಕಾಣುತ್ತೇವೆ. ಅಂಬಿಗರ ಚೌಡಯ್ಯ ವೃತ್ತಿಯಲ್ಲಿ ಅಂಬಿಗನಾಗಿರಬಹುದು, ಗುರುವನುಗ್ರಹಕ್ಕೆ ಪಾತ್ರನಾಗಿ ಗುರುಪುತ್ರನೇ ಆದ ಮೇಲೆ ಶೈವಪದ್ಧತಿಯಂತೆ ನಡೆಯುತ್ತ, ಭಕ್ತನ ಮನೆಯ ಪಡಿಪದಾರ್ಥಗಳಿಂದ ಹೊಟ್ಟೆ ಹೊರೆಯುವ ಗುರುವರ್ಗದ ನಡೆ ನುಡಿಗಳನ್ನು ಸಹಿಸುವುದಾದರೂ ಹೇಗೆ? ಅವನ ಸಾತ್ವಿಕ ಕೋಪವಿಲ್ಲಿ ಭುಗುಲೆಂದು ಮೇಲೆದ್ದು ಕೆಂಡ ಕಾರಿದೆ ಎನ್ನಬಹುದು.

❑

## ಶ್ರೀವಾಣಿ

ಪರಮಾತ್ಮನ ಪಥದಲ್ಲಿ ಪ್ರತಿದಿನವೂ ಒಂದೊಂದು ಹೆಜ್ಜೆ ಮುಂದೆ ಮುಂದೆ ಹೋಗುವ ಕೆಲಸ ಮಾಡಿದರೆ ಅದು ನಿಜವಾದ ಜೀವನ, ಅಂತಹ ವ್ಯಕ್ತಿಯೇ ನಿಜವಾದ ಮನುಷ್ಯ.

## ಲಿಂಗ ದೀಕ್ಷಾ ಸಂಸ್ಕಾರ

*ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೬ನೇ ಜನ್ಮದಿನಾಚರಣೆ – ಗುರುವಂದನ ಸಮಾರಂಭದ ಶುಭ ಸಂದರ್ಭದಲ್ಲಿ ದಿನಾಂಕ ೬-೪-೨೦೦೩ರಂದು ವೀರಶೈವ ವಟುಗಳಿಗೆ ಲಿಂಗದೀಕ್ಷಾ ಸಂಸ್ಕಾರವನ್ನು ಸಂಯೋಜಿಸಲಾಗಿದೆ. ಆಸಕ್ತಿಯುಳ್ಳ ವಟುಗಳು ದಿನಾಂಕ : ೫-೪-೨೦೦೩ ರಂದು ಸಂಜೆ ಶ್ರೀಮಠಕ್ಕೆ ಆಗಮಿಸಿ ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು, ಹೆಚ್ಚಿನ ವಿವರಗಳಿಗೆ ಶ್ರೀಮಠದ ಕಾರ್ಯಾಲಯವನ್ನು ಸಂಪರ್ಕಿಸಬೇಕೆಂದು ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರು ಪ್ರಕಟಣೆಯಲ್ಲಿ ಕೋರಿದ್ದಾರೆ.*

## ಬಸವಣ್ಣನವರ ವಚನಗಳು

ಕಾಳಿಯ ಕಂಕಾಳದಿಂದ ಮುನ್ನ, ತ್ರಿಪುರಸಂಹಾರದಿಂದ ಮುನ್ನ;
ಹರಿವಿರಂಚಿಗಳಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ;
ಮುನ್ನ, ಮುನ್ನ, ಮುನ್ನ -
ಅಂದಿಂಗೆಳೆಯ ನೀನು; ಹಳೆಯ ನಾನು,
ಮಹಾದಾನಿ ಕೂಡಲ ಸಂಗಮದೇವಾ.

ಕರಿ ಘನ ಅಂಕುಶ ಕಿರಿದೆನ್ನಬಹುದೇ? ಬಾರದಯ್ಯಾ,
ಗಿರಿ ಘನ ವಜ್ರ ಕಿರಿದೆನ್ನಬಹುದೇ? ಬಾರದಯ್ಯಾ;
ತಮಂಧ ಘನ ಜ್ಯೋತಿ ಕಿರಿದೆನ್ನಬಹುದೇ? ಬಾರದಯ್ಯಾ,
ಮರಹು ಘನ ನಿಮ್ಮ ನೆನೆವ ಮನ ಕಿರಿದೆನ್ನಬಹುದೇ?
ಬಾರದಯ್ಯಾ, ಕೂಡಲ ಸಂಗಮದೇವಾ.

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ?
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ,
ಮನೆಯೊಳಗೆ ಮನೆಯೊಡೆಯನಿಲ್ಲಾ,
ಕೂಡಲ ಸಂಗಮದೇವಾ.





## ಮುತ್ತು ಹೋಯಿತು



ಸಾಹುಕಾರ್ ಶ್ರೀ ಚೆನ್ನಬಸಪ್ಪನವರು

ದಿನಾಂಕ ೩೧-೧-೨೦೦೩ ಸಾಹುಕಾರ್ ಶ್ರೀ ಚೆನ್ನಬಸಪ್ಪನವರು ನೆನಪಾಗಿ ಹೋದರು; ಬಾರದ ದಾರಿಯನ್ನು ಹಿಡಿದು ನಡೆದರು. ಅವರ ಬಂಧುಬಳಗದವರಿಗೆ, ಕುಟುಂಬ ವರ್ಗದವರಿಗೆ, ಅಪಾರ ಸಂಖ್ಯೆಯ ಅಭಿಮಾನಿಗಳಿಗೆ ಅವರ ನಿಧನದ ವಾರ್ತೆ ಬರಸಿಡಿಲಿನಂತೆರಗಿತು, ಸಹಸ್ರ ಸಂಖ್ಯೆಯಲ್ಲಿ ಬಂದ ಜನಸ್ತೋಮ ಭಾರವಾದ ಮನಸ್ಸಿನಿಂದ ಕಂಬನಿ ಮಿಡಿದರು. ಅಂತ್ಯದರ್ಶನ ಮಾಡಿದರು.

ಬಳ್ಳಾರಿಯ ಶ್ರೀ ಚೆನ್ನಬಸಪ್ಪನವರದು ಸಾಹಸದ ಬದುಕು. ''ಉರಿಬರಲಿ ಸಿರಿಬರಲಿ ಬೇಕು ಬೇಡೆ''ನೆಂಬ ಮನೋಧರ್ಮ. ಬರಕ್ಕೆ ತಗ್ಗಿದವರಲ್ಲ, ಸಿರಿಗೆ ಹಿಗ್ಗಿದವರೂ ಅಲ್ಲ. ಸಹಾಯ ಯಾಚಿಸಿ ಬಂದವರನ್ನು ಬರಿಗೈಲಿ ಕಳುಹಿಸಿದವರಲ್ಲ. ಶ್ರೀ ಸಿದ್ಧಗಂಗಾ ಮಠದ ಶ್ರೀಗಳವರ ಕಾರುಣ್ಯದ ಬೆಳಕಿನಲ್ಲಿ ಅರಳಿದ ಶ್ರೀಯುತರು ತಮ್ಮ ಕೊನೆಯ ಉಸಿರುವವರೆಗೂ ಗುರುಚರಣದ ಮೇಲೆ ತನುತೃಣವನ್ನಿರಿಸಿ ಬೆಳೆದರು. ಕಷ್ಟಕಾಲದಲ್ಲಿ ಶ್ರೀಮಠದಲ್ಲಿ ಆಶ್ರಯ ಪಡೆದುಕೊಂಡು ಮುಂದೆ ಬಂದರು. ತಮ್ಮ ಇಡೀ ಕುಟುಂಬಕ್ಕೆ ಶ್ರೀಮಠ ನೆರಳು ನೀಡಿ ಭವಿಷ್ಯಕ್ಕೆ ಭಾಗ್ಯದ ಬಾಗಿಲನ್ನು ತೆರೆದುದನ್ನು ಎಂದೂ ಕನಸು-ಮನಸ್ಸಿನಲ್ಲೂ ಮರೆಯದೆ ನೆನೆದು



ಫೆಬ್ರವರಿ ೯ರಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆದ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಹರಗುರು ಚರಮೂರ್ತಿಗಳು, ಗಣ್ಯರು, ಅಭಿಮಾನಿಗಳು ಮತ್ತು ಕುಟುಂಬ ವರ್ಗದವರು




ಲಿಂಗೈಕ್ಯ ಸಾಹುಕಾರ್ ಚೆನ್ನಬಸಪ್ಪನವರ ಕುಟುಂಬ ವರ್ಗದವರಿಂದ
ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಗೌರವ ಸಮರ್ಪಣೆ

ಶ್ರೀ ಚೆನ್ನಬಸಪ್ಪನವರು ಶ್ರೀ ಸಿದ್ಧಗಂಗಾ ಶ್ರೀಗಳನ್ನು ನಡೆದಾಡುವ ದೇವರೆಂದೇ ನಂಬಿನಡೆದವರು. ತಮ್ಮ ಸಾಹುಕಾರ್ ಶ್ರೀಮಂತಿಕೆಯೆಂಬುದು ಗುರುಮುಟ್ಟಿ ಗುಡ್ಡ ವಾದದ್ದೆಂಬ ನಿಷ್ಠೆ ಅವರದಾಗಿತ್ತು. ಅಬ್ಕಾರಿ ವ್ಯಾಪಾರವನ್ನು ಕೈಗೊಂಡು ಆಳಾಗಿ ದುಡಿದು ಅರಸಾಗಿ ಬೆಳೆದರು; ಬಾಳಿದರು. ಸಹೋದರರನ್ನು, ತಂಗಿಯನ್ನು, ಧರ್ಮಪತ್ನಿಯನ್ನು, ಮಕ್ಕಳನ್ನು ಕಣ್ಣಲ್ಲಿ ಕಣ್ಣಿಟ್ಟು ಸಲಹಿದ ಸದ್ಗೃಹಸ್ಥ ಚೆನ್ನಬಸಪ್ಪನವರು ತಂದೆ-ತಾಯಿಗಳ ಅಚ್ಚುಮೆಚ್ಚಿನ ಮಗನಾಗಿ ಅರಳಿದ್ದು ಈಗ ಕೇವಲ ನೆನಪು ಅಷ್ಟೆ. ಹಳ್ಳಿ ಕಡೆ ಒಂದು ಮಾತು ಹೇಳುತ್ತಾರೆ – ಚೆನ್ನಬಸಪ್ಪನಂಥವರನ್ನು ಕಂಡಾಗ 'ತುಂಬಿದ ತೊರೆ', 'ಮುತ್ತು ಮುತ್ತಿದ್ದಹಾಂಗೆ' ಎಂದು. ಹೌದು *"ಮಂದಿ ಮಕ್ಕಳೊಳಗೆ ಚೆಂದಾಗೊಂದಿರಬೇಕು । ನಂದಿಯ ಶಿವನ ದಯದಿಂದ ಹೋಗಾಗ ಮಂದಿ ಬಾಯಾಗೆ ಇರಬೇಕು"*. ಜನಪದರು ಸಾರ್ಥಕ ಬದುಕಿಗೆ ನೀಡಿರುವ ಪ್ರಮಾಣಪತ್ರ ಇದು. ಎಷ್ಟು ದಿವಸ ಬದುಕಿದ್ದರೆಂಬುದು ದೊಡ್ಡದಲ್ಲ ಹೇಗೆ ಬದುಕಿದ್ದರೆಂಬುದೇ ದೊಡ್ಡದು. ಅಣ್ಣ ಬಸವಣ್ಣನವರು ಹೇಳಿಲ್ಲವೆ "ಲೇಸನೆನಿಸಿಕೊಂಡು ಅಯ್ದು ದಿನ ಬದುಕಿದಡೇನು? ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದಡೇನು? ಲೇಸೆನಿಸಿಕೊಂಡು ಮೂರು ದಿನ ಬದುಕಿದಡೇನು? ಲೇಸನಿಸಿಕೊಂಡು ಎರಡು ದಿನ ಬದುಕಿದಡೇನು? ಜೀವಿತಂ ಶಿವ ಭಕ್ತಾನಾಂ ಪರಂ ಪಂಚದಿನಾನಿ ಚ । ಅಜಕಲ್ಪ ಸಹಸ್ರೇಭ್ಯೋ ಭಕ್ತಿಹೀನಸ್ಯ ಶಾಂಕರಿ । ಎಂಬುದಾಗಿ ಕೂಡಲ ಸಂಗನ ಶರಣರ ವಚನದಲ್ಲಿ ಲೇಸೆನಿಸಿಕೊಂಡು ಒಂದು ದಿನ ಬದುಕಿದಡೇನು" ಬದುಕಿನ ಸಾರ್ಥಕತೆ ದೀರ್ಘಕಾಲ ಬಾಳುವುದರಲ್ಲಿಲ್ಲ, ಲೇಸೆನಿಸಿಕೊಂಡು ಬಾಳುವುದರಲ್ಲಿದೆ. ಗುರು, ಲಿಂಗ, ಜಂಗಮ ಈ ಮೂವರೂ ಲೇಸು ಎಂದು ಮೆಚ್ಚಿ ನುಡಿಯುವ ಹಾಗೆ ಬಾಳಿದ ಸಾಹುಕಾರ್ ಚೆನ್ನಬಸಪ್ಪನವರು ಈಗ ಕೇವಲ ನೆನಪಿನ ದೀಪಮಾತ್ರ.

ಕೊಂಡರು. ಅವರ ಬಾಯಲ್ಲಿ ಎಂದೂ ಕಟುಮಾತು ಬರಲಿಲ್ಲ. ತಮ್ಮ ಅಭಿವೃದ್ಧಿಗೆ ಕಾರಣರಾದ ಎಲ್ಲರನ್ನೂ ಮೇಲಿಂದ ಮೇಲೆ ಸ್ಮರಿಸುತ್ತಿದ್ದರು. ಭದ್ರಾವತಿಯ ಬಂಧು ಶ್ರೀ ಇಬ್ರಾಹಿಂರವರನ್ನು ತಮ್ಮ ಪಿತೃ ಸಮಾನರೆಂದು ಭಾವಿಸಿ ಗೌರವಿಸುತ್ತಿದ್ದರು.

ಸಾಹುಕಾರ್ ಚೆನ್ನಬಸಪ್ಪನವರು ಹಣದಲ್ಲಿ ಮಾತ್ರ ಸಾಹುಕಾರರಾಗಿರಲಿಲ್ಲ. ಗುಣದಲ್ಲಿ, ಸ್ನೇಹದಲ್ಲಿ, ಸೇವೆಯಲ್ಲಿ, ಸಹಾಯ, ಸಹಕಾರಗಳಲ್ಲಿಯೂ ಸಾಹುಕಾರರಾಗಿದ್ದುದನ್ನು ಅವರಿಂದ ಉಪಕೃತರಾದವರೆಲ್ಲ ಸ್ಮರಿಸುತ್ತಾರೆ. ಸಾಹುಕಾರ್ ಪದ ಅವರ ಮನೆನತದ ಹೆಸರು. ದೇಸಾಯಿ, ಜಹಗೀರುಗಳಿರುವಂತೆ ಸಾಹುಕಾರ್ ಕೂಡ ಮನೆತನಕ್ಕೆ ಸಂಬಂಧಿಸಿದ್ದು. ಸಾಹುಕಾರ್ ಶ್ರೀ ನೀಲಕಂಠಪ್ಪ ಮತ್ತು ಶ್ರೀಮತಿ ಶರಣಮ್ಮನವರಿಗೆ ದಿನಾಂಕ ೨-೨-೧೯೫೫ರಲ್ಲಿ ಸಾಹುಕಾರ್ ಚೆನ್ನಬಸಪ್ಪನವರು ಜನಿಸಿದರು. ಸಿರಿಗುಪ್ಪ ತಾಲ್ಲೂಕು ಬಾಗವಾಡಿ ಶ್ರೀಯುತರ ಜನ್ಮಸ್ಥಳ. ಶ್ರೀ ಎಸ್. ಶ್ರೀಕಂಠಪ್ಪ, ಶ್ರೀ ಎಸ್. ಸತೀಶ್ ಬಾಬು, ಚೆನ್ನಬಸಪ್ಪನವರ ಸಹೋದರರು. ಸೋದರಿ ಒಬ್ಬಳು. ಶ್ರೀಮತಿ ಶಾರದ ಅವರು ಶ್ರೀಯುತರ ಧರ್ಮಪತ್ನಿ. ಕುಮಾರಿ ಚೇತನ, ಕುಮಾರಿ ಚಂದನ ಮಕ್ಕಳು. ಬಾಗವಾಡಿಯ ಜಮೀನ್ದಾರರಾಗಿದ್ದ ಶ್ರೀಯುತರ ಪೂರ್ವಿಕರು ಸುಖ ದುಃಖಗಳನ್ನು ಸಮಸಮವಾಗಿ ಅನುಭವಿಸಿದ ಸುಸಂಸ್ಕೃತರು.







# ವಿಶ್ವಮಹಿಳಾ ದಿನಾಚರಣೆ

– ಪ್ರೇಮಾ ಮಲ್ಲಣ್ಣ
3ನೇ ಅಡ್ಡರಸ್ತೆ, ಸೋಮೇಶ್ವರಪುರ,
ತುಮಕೂರು.

ವರ್ಷದ ಎಲ್ಲಾ ದಿನಗಳಲ್ಲೂ ಒಂದಲ್ಲ ಒಂದು ಸಮಾರಂಭ, ಉತ್ಸವ, ದಿನಾಚರಣೆಗಳು ನಡೆಯುತ್ತಲೇ ಇರುತ್ತವೆ. ಆಚರಣೆಗಳಲ್ಲಿ ವಿಭಿನ್ನತೆ, ವೈವಿಧ್ಯತೆಗಳನ್ನು ಕಾಣ ಬಹುದಷ್ಟೇ! ಮಕ್ಕಳ ದಿನಾಚರಣೆ, ಶಿಕ್ಷಕರ ದಿನಾಚರಣೆ, ಮಹಾತ್ಮರ ದಿನಾಚರಣೆ ಹೀಗೆ ಹಲವಾರು ಅನೂಚಾನವಾಗಿ ಆಚರಿಸಿಕೊಂಡು ಬರುತ್ತಿರುವ ದಿನಾಚರಣೆಗಳ ಜೊತೆಗೆ ಇತ್ತೀಚೆಗೆ ಕೆಲವು ಹೊಸ ಹೊಸ ದಿನಾಚರಣೆಗಳೂ ಸೇರಿಕೊಂಡು ಅಗಣಿತವಾಗುತ್ತಿವೆ. ಉದಾಹರಣೆಗೆ ಮಾತೆಯರ ದಿನಾಚರಣೆ, ಕೃತಜ್ಞತಾ ದಿನಾಚರಣೆ, ಪೃಥ್ವೀ ದಿನಾಚರಣೆ ಮುಂತಾದವುಗಳು.

ಕೆಲವು ದಿನಾಚರಣೆಗಳು ಕೌಟುಂಬಿಕ, ಮತ್ತೆ ಕೆಲವು ಸ್ಥಳೀಯ, ಹಲವು ರಾಷ್ಟ್ರೀಯ, ಮತ್ತೆ ಕೆಲವು ಅಂತರ ರಾಷ್ಟ್ರೀಯ. ಇತ್ತೀಚೆಗೆ ವಿಶ್ವದಾದ್ಯಂತ ಆಚರಿಸಲ್ಪಡುತ್ತಿರುವ 'ಮಹಿಳಾ ದಿನಾಚರಣೆ' ಪ್ರಾಮುಖ್ಯತೆಯನ್ನು ಪಡೆದು ಕೊಂಡಿದೆ, ಮಹಿಳೆಯರ ಸರ್ವಾಂಗೀಣ ಪ್ರಗತಿಯ ಆಶಯವನ್ನು ಹೊಂದಿದೆ.

ಶತ-ಶತಮಾನಗಳಿಂದ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ಗೌರವಪೂರ್ಣವಾದ ನೆಲೆ-ಬೆಲೆ ಸೂಕ್ತ ರೀತಿಯಲ್ಲಿ ದೊರಕದೆ, ಮೂಕಪಶುವಿನಂತೆ, ಪಂಜರದ ಪಕ್ಷಿಯಂತೆ, ಗೃಹ ಬಂಧನದಲ್ಲಿದ್ದು ಬವಣೆಯ ಬದುಕನ್ನು ಸವೆಸುತ್ತಿದ್ದ ಮಹಿಳೆಗೆ ಈಗ ಮಾನ್ಯತೆ ದೊರಕಿ, 'ಶಾಪವಿಮುಕ್ತದಿನ' ಅಂದರೆ 'ಮಹಿಳಾ ದಿನ'ವನ್ನು ಆಚರಿಸುತ್ತಿರುವುದು ಮಹಿಳೆಯರಿಗೆ ದೊರಕಿಸಿಕೊಟ್ಟ ಗೌರವವಾಗಿದೆ. ಮಹಿಳೆ ತಾನು ಕಳೆದುಕೊಂಡಿದ್ದ ಧೈರ್ಯ, ಸ್ಥೈರ್ಯ, ಆತ್ಮವಿಶ್ವಾಸ, ಸ್ವಾಭಿಮಾನ ಮುಂತಾದವುಗಳನ್ನು ಪಡೆದು ಕೊಳ್ಳುವ ನಿಟ್ಟಿನಲ್ಲಿ ಈ ದಿನಾಚರಣೆ ಸಹಕಾರಿಯಾಗಿದೆ.

"ಹೆಣ್ಣಿನಿಂದಲೆ ಇಹವು ಹೆಣ್ಣಿನಿಂದಲೆ ಪರವು" – ಎಂದು ಹೇಳಿರುವ ಸರ್ವಜ್ಞ ಇಹ-ಪರಗಳ ಸಾಧನೆಯಲ್ಲಿ ಹೆಣ್ಣಿನ ಮಹತ್ವವನ್ನು ಗುರುತಿಸಿದರೆ, ಸಂಸ್ಕೃತ ಶ್ಲೋಕವೊಂದು ಹೀಗೆ ಹೇಳುತ್ತದೆ –

*"ನ ಗೃಹಂ ಗೃಹ ಮಿತ್ಯಾಹು ಗೃಹಣಿ ಗೃಹಮುಚ್ಯತೇ*
*ಗೃಹಂತು ಗೃಹಿಣಿ ವಿಹೀನಂ ಅರಣ್ಯ ಸದೃಶಂ ಭವೇತ್"*

ಬಲ್ಲವರು ಹೇಳುವಂತೆ ಒಂದು ಕಟ್ಟಡವನ್ನು ಗೃಹವೆಂದು ಹೇಳಲಾಗುವುದಿಲ್ಲ, ಗೃಹಿಣಿ ಇಲ್ಲದ ಗೃಹ ಅದು ಬರೀ ಕಟ್ಟಡವೇ ಸರಿ. ಇದು ಗೃಹದಲ್ಲಿ ಹೆಣ್ಣಿನ ಸ್ಥಾನವನ್ನು, ಅಗತ್ಯತೆಯನ್ನು ಎತ್ತಿ ಹಿಡಿಯುತ್ತದೆ, ಹೆಣ್ಣು ಜೀವನದಾಯಿನಿ, ಚೈತನ್ಯ ಪ್ರದಾಯಿನಿ. ಗೃಹದಲ್ಲಿ ಅವಳ ಪಾತ್ರ ಬಹುಮುಖವಾದದ್ದು. ತಾಯಿಯಿಂದ ದಾದಿಯವರೆಗಿನ ಎಲ್ಲ ಕೆಲಸಗಳನ್ನು ನಿರ್ವಹಿಸುವ ನಿಸ್ವಾರ್ಥಿ, ಹಿತೈಷಿ. ಸರ್ವರನ್ನೂ ಪೊರೆದು ಪೋಷಿಸುವ ಅನ್ನಪೂರ್ಣೆ. ಆದರೆ ಅವಳ ತ್ಯಾಗ-ಸಮರ್ಪಣೆಗಳು ಅವಳ ಮಣ್ಣು-ಹೊನ್ನುಗಳಂಥ ಪೂರಕವಾಗಿರಲಿಲ್ಲ ನಿರ್ಜೀವ ವಸ್ತುಗಳೊಂದಿಗೆ ಹೋಲಿಸಿ ಹೆಣ್ಣು-ಹೊನ್ನು ಮಣ್ಣುಗಳು ಮಾಯೆಯ ಪ್ರತೀಕವೆಂದರು. ಅದರಲ್ಲೂ ಹೆಣ್ಣು ಮೋಕ್ಷ ಸಾಧನೆಗೆ ಅಡ್ಡಿ ಎಂದು ಭಾವಿಸಲ್ಪಟ್ಟಳು. ಆಧ್ಯಾತ್ಮ ಸಾಧನೆಯ ಹಕ್ಕು ಅವಳಿಗಿರಲಿಲ್ಲ, ಆಕೆ ವಿವಾಹವಾಗಿ ಪತಿ ಸೇವೆ ಮಾಡಿದರೆ ಮಾತ್ರ ಅವಳಿಗೆ ಸದ್ಗತಿ ಎಂದು ಸಾರಿದುವು ನಮ್ಮ ಪುರಾಣ ಪುಣ್ಯಕಥೆಗಳು.

ಕಾಲಚಕ್ರ ಉರುಳಿತು, ಸಮಾಜದ ಒಟ್ಟು ಜನಸಂಖ್ಯೆಯ ಅರ್ಧಭಾಗದಷ್ಟಿದ್ದ ಸ್ತ್ರೀಯರಿಗೆ ಸಾಮಾಜಿಕ ನ್ಯಾಯ ದೊರಕತೊಡಗಿತು. ಸಮಾಜಶಾಸ್ತ್ರದ ದಿಗ್ಗಜರಾದ ಹರ್ಬರ್ಟ್‌ಸ್ಪೆನ್ಸರ್‌ರವರು ತಮ್ಮ ಪುಸ್ತಕ **'ದಿ ಡೇಟಾ ಆಫ್ ಸೋಜಿಯಾಲಜಿ'**ಯಲ್ಲಿ ಹೀಗೆ ಬರೆದಿದ್ದಾರೆ – *"ಒಂದು ಸಮುದಾಯವು ಎಷ್ಟು ಅಧೋಗತಿಗೆ ಇಳಿದಿದೆ ಎಂಬುದನ್ನು ಅಂದಾಜುಮಾಡಬೇಕಾದರೆ ಅದು ತನ್ನಲ್ಲಿರುವ ಸ್ತ್ರೀಯರನ್ನು ಹೇಗೆ ನಡೆಸಿಕೊಳ್ಳುತ್ತದೆ ಎಂಬುದನ್ನು ನಾವು ನೋಡಬೇಕು. ಒರಟು ಮತ್ತು ಅನಾಗರೀಕ ಜನಾಂಗಗಳೆಲ್ಲಾ ತಮ್ಮ ಸ್ತ್ರೀಯರನ್ನು ಕಠೋರವಾಗಿ, ಕ್ರೂರವಾಗಿ ನಡೆಸಿಕೊಂಡಿವೆ."*

ಸ್ಪೆನ್ಸರ್‌ರವರ ಈ ಉಕ್ತಿಯನ್ನು ಭಾರತೀಯ ಸ್ತ್ರೀ ಸಮೂಹದೊಂದಿಗೆ ಅನ್ವಯಿಸಿ ಉತ್ತರ ಬಯಸಿದಾಗ 'ಹೌದು', ಅಥವಾ 'ಇಲ್ಲ' ಎಂಬ ದ್ವಂದ್ವ ಹೇಳಿಕೆ ದೊರಕುತ್ತದೆ.

ವೇದಗಳ ಕಾಲದಲ್ಲಿ ಪುರುಷರಿಗೆ ಸರಿಸಮವಾದ ಸ್ವಾತಂತ್ರ್ಯ, ಸಮಾನತೆ, ಶಿಕ್ಷಣ ಮುಂತಾದವುಗಳಲ್ಲಿ ಅರ್ಹತೆಯನ್ನು ಹೊಂದಿದ್ದ ಮಹಿಳೆ, ಆ ನಂತರ ಶಾಸ್ತ್ರಗಳ ರಚನೆಯಾಗಿ ಆಚರಣೆಗೆ ಬಂದಂತೆಲ್ಲಾ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ನಿಸ್ಸಾಯಕಳಾದಳು, ನಿಕೃಷ್ಟಳೆನಿಸಿದಳು. ಕ್ರಮೇಣ ಸೂತ್ರದ ಗೊಂಬೆಯಂತಾದಳು. ಲಕ್ಷ್ಮಣ ಸೀತಾದೇವಿಯನ್ನು ಕಾಡಿಗೊಯ್ದು ಬಿಟ್ಟಾಗ ಸೀತೆಗೆ ಅದು ಶ್ರೀರಾಮನಾಜ್ಞೆಯೆಂದು ತಿಳಿಯುತ್ತದೆ.

''ಕರುಣಾಳು ರಾಘವನದು ತಪ್ಪಿಲ್ಲ, ಹೆಣ್ಣಾಗಿ ಹುಟ್ಟಿದ ನನ್ನದೇತಪ್ಪು'' ಎನ್ನುತ್ತಾಳೆ. ಹಳ್ಳಿಯ ಹೆಣ್ಣುಮಗಳೊಬ್ಬಳು ''ಹೆಣ್ಣಾಗಿ ಹುಟ್ಟೋಕ್ಕಿಂತ ಭೂಮಿಯ ಮೇಲೊಂದು ಮರವಾಗಿ ಹುಟ್ಟಿದರೆ ಲೇಸು'' ಎನ್ನುತ್ತಾಳೆ. ಡಾ. ಸಿದ್ಧಯ್ಯಪುರಾಣಿಕರು ತಮ್ಮ ವಚನವೊಂದರಲ್ಲಿ–

*''ಸತಿ ತಪ್ಪಿದರೂ ಚಿತೆ ತಪ್ಪಲಿಲ್ಲ ಈ ದೇಶದಲ್ಲಿ ಸತಿಗೆ!*
*ಮುಗಿಯದ ಪಯಣ ಅವಳದು, ಚಿತೆಯಿಂದ ಚಿತೆಗೆ!*
*ಆಗ ಸಹಗಮನದ ಚಿತೆ, ಈಗ ವರದಕ್ಷಿಣೆಯ ಚಿತೆ,*
*ಬಲಾತ್ಕಾರಗಳ ಚಿತೆ, ಶೀಲಹರಣಗಳ ಚಿತೆ!*
*ಕೊನೆಗೂ ಹೆಣ್ಣಿನ ಬಾಳು ಕಣ್ಣೀರಿನ ಕಥೆ! ...''*

ಎಂದು ಹೆಣ್ಣನ್ನು ಕುರಿತು ಹೇಳಿದ್ದಾರೆ. ಈ ಮಾರ್ಮಿಕ ನುಡಿಗಳಿಂದ ಸ್ಪಷ್ಟಪಡುವ ಅಂಶವೆಂದರೆ ಯುಗ-ಯುಗಾಂತರಗಳಿಂದ ಮಹಿಳೆ ಕಷ್ಟಕೋಟಲೆಗಳಲ್ಲಿ, ಸಿಕ್ಕಿ ನರಳುತ್ತಾ ಉಕ್ಕಿ ಹರಿಯುವ ಕಣ್ಣೀರನ್ನು ಒರೆಸಿಕೊಳ್ಳುತ್ತಾ ಭೂಮಾತೆಯಂತೆ ಕ್ಷಮಾಶೀಲೆಯಾಗಿದ್ದಾಳೆ.

ಸಂವಿಧಾನದಲ್ಲಿ ಸ್ತ್ರೀ-ಪುರುಷರಿಗೆ ಭೇದಕಲ್ಪಿಸಿಲ್ಲ. ಎಲ್ಲ ವಿಷಯಗಳಲ್ಲೂ ಸಮಾನತೆ ನೀಡಲಾಗಿದ್ದರೂ ಸಮಾಜದಲ್ಲಿನ ಲಿಂಗಭೇದ ಸಾಮಾಜಿಕ ಸ್ವಾಸ್ಥ್ಯವನ್ನು ಹಾಳುಮಾಡುವ ಕ್ರೂರ ಪದ್ಧತಿಯಾಗಿದೆ. ವಿಶ್ವಸಂಸ್ಥೆಯ ಒಂದು ವರದಿಯ ಪ್ರಕಾರ ಅಭಿವೃದ್ಧಿಶೀಲ ರಾಷ್ಟ್ರಗಳ ಮುನ್ನಡೆ ಹಾಗೂ ಸಾಮಾಜಿಕ ಸಾಮರಸ್ಯಕ್ಕೆ ಲಿಂಗ ಭೇದ ತಾರತಮ್ಯವೇ ಅಡ್ಡಗೋಡೆಯಾಗಿದೆ. ಭಾರತದಲ್ಲಿ ಈ ಸಮಸ್ಯೆ ಎಷ್ಟು ಭೀಕರವಾಗಿದೆಯೆಂದರೆ ಹೆಣ್ಣು ಸಂತತಿಯನ್ನು ಇಲ್ಲವಾಗಿಸುವ ಅಮಾನವೀಯ ಪ್ರಯತ್ನಗಳು ನಡೆಯುತ್ತಿವೆ. ಹೆಣ್ಣು ಭ್ರೂಣ ಹತ್ಯೆ – ವರದಕ್ಷಿಣೆ ಕಾರಣಕ್ಕಾಗಿ ಹತ್ಯೆ ಹೀಗೆ ಹೆಣ್ಣು ಜೀವಗಳ ಹತ್ಯೆ ಒಂದಲ್ಲ ಒಂದು ಕಾರಣಕ್ಕಾಗಿ ಸರಮಾಲೆಯೇ ನಡೆಯುತ್ತಿದೆ. ೧೯೯೦ರಲ್ಲಿ ಮುಂಬೈನಗರ ಒಂದರಲ್ಲೇ ೮೦೦೦ ಹೆಣ್ಣು ಭ್ರೂಣಗಳ ಹತ್ಯೆ ನಡೆಯಿತೆಂದು ಅಂಕಿ ಅಂಶಗಳು ಸಾರುತ್ತವೆ. ತಮಿಳುನಾಡು ಕೂಡ ಇದೇ ದಾರಿಯನ್ನು ಅನುಸರಿಸುತ್ತಿದೆ. ಆ ಭಾಗದ ತಾಯಿಯೊಬ್ಬಳನುಡಿ ಹೃದಹೀನತೆಗೆ ಸಾಕ್ಷಿಯಾಗಿದೆ. 'ನನ್ನ ಕುಟುಂಬಕ್ಕಾಗಿ ನಾನೊಂದು ಗುಂಡುಮಗುವನ್ನು ಹಡೆಯುವವರೆಗೂ ನನಗೆ ಹುಟ್ಟುವ ಹೆಣ್ಣು ಮಕ್ಕಳನ್ನು ಕೊಲ್ಲುತ್ತಲೇ ಇರುತ್ತೇನೆ', ಎಂಬ ಮಾತು ಹೆಣ್ಣನ್ನು ಕಾಣುವ ರೀತಿ ವ್ಯಕ್ತವಾಗುತ್ತದೆ. ತಾಯಿಯೇ ಮೃತ್ಯುದೇವತೆಯಾದರೆ ಸಂತಾನವನ್ನು ಪೊರೆಯುವವರಾರು?

ಭಾರತದಲ್ಲಿ ಮಾತ್ರ ಹೆಣ್ಣಿಗೆ ಸಮಸ್ಯೆಗಳ ಹೊರೆ ಇದೆ ಎಂದು ಭಾವಿಸುವಂತಿಲ್ಲ, ಇದು ವಿಶ್ವವ್ಯಾಪಿ, ಸಮಸ್ಯೆಗಳು ಬೇರೆ-ಬೇರೆ ವಿಧಗಳಾಗಿರಬಹುದು ಅಷ್ಟೇ!

ಒಂದು ಸಮಾಧಾನಕರ ಸಂಗತಿಯೆಂದರೆ ಕನ್ನಡ ನಾಡಿನ ಹೆಣ್ಣು ಮಕ್ಕಳು ಅತಿಯಾದ ದೈಹಿಕ-ಮಾನಸಿಕ ಹಿಂಸೆಗೆ ಒಳಗಾಗದೆ ತಿಳಿವನ್ನು – ಜಾಗೃತಿಯನ್ನು ಬಹಳ ಬೇಗ ಗಳಿಸಿಕೊಂಡದ್ದು ೧೧-೧೨ ಶತಮಾನಗಳಲ್ಲೇ. ಇಲ್ಲಿನ ಮಹಿಳೆಯರಿಗೆ ವೇದಗಳ ಕಾಲದಲ್ಲಿ ಸ್ತ್ರೀಯರಿಗೆ ದೊರೆಯುತ್ತಿದ್ದ ಮಾನ್ಯತೆ, ಸಮಾನತೆ, ಸ್ವಾತಂತ್ರ್ಯಗಳು ದೊರಕಿದ್ದವು. ಇದು ಬಸವಾದಿ ಶರಣರು ಸ್ತ್ರೀ-ಪುರುಷರೆಂಬ ಭೇದಭಾವವನ್ನು ತೊಡೆದು, ಸಾಮಾಜಿಕ ಸಮಾನತೆಯ ಆಧಾರದ ಮೇಲೆ ನಿರ್ಮಿಸಿದ ಹೊಸ ಸಮಾಜವಾಗಿತ್ತು. ಶರಣರ ಅಂದಿನ ವೈಚಾರಿಕ ಚಿಂತನೆಯ ಫಲ; ಈಗ ವಿಶ್ವದಾದ್ಯಂತ ಜಾರಿಗೆ ಬರುತ್ತಿದೆ, ವಿಶ್ವಸಂಸ್ಥೆ ಮಹಿಳೆಯರ ಜಾಗೃತಿಗಾಗಿ ಅನೇಕ ಕಾರ್ಯಕ್ರಮಗಳ ಸೂಚಿಯನ್ನು ತನ್ನ ಸದಸ್ಯ ರಾಷ್ಟ್ರಗಳಿಗೆ ಕೊಟ್ಟಿದೆ. ಅವುಗಳಲ್ಲಿ ಅತಿಮುಖ್ಯವಾದುದು **'ಸೆಡಾ'** (C, E, D, A, W) 'ಕನ್‌ವೆನ್ಷನ್ ಆನ್ ಎಲಿಮಿನೇಷನ್ ಆಫ್ ಆಲ್ ಕೈಂಡ್ಸ್ ಆಫ್ ಡಿಸ್‌ಕ್ರಿಮಿನೇಷನ್ ಎಗೆನೆಸ್ಟ್ ವಿಮೆನ್'. ಮಹಿಳೆಯರಿಗೆ ಯಾವ ವಿಧವಾದ ತಾರತಮ್ಯವನ್ನು ತೋರದಿರುವುದು ಅದರ ಉದ್ದೇಶ. ಮಹಿಳೆಯರಲ್ಲಿ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಜಾಗೃತಿ ಮೂಡಬೇಕೆಂಬುದೇ ವಿಶ್ವಸಂಸ್ಥೆಯ ಆಶಯ.

ಪ್ರತಿವರ್ಷ ಮಾರ್ಚ್ ೮ನೇ ತಾರೀಖಿನಂದು 'ಮಹಿಳಾ ದಿನಾಚರಣೆ'ಯನ್ನು ಆಚರಿಸಲಾಗುತ್ತಿದೆ. ಅಮೆರಿಕೆಯಲ್ಲಿ ಮಹಿಳಾ ಕಾರ್ಮಿಕರು ಕೆಲಸದ ಅವಧಿಯ ವಿರುದ್ಧ ಪ್ರತಿಭಟಿಸಿದ ದಿನವನ್ನು ಮಹಿಳಾ ದಿನಾಚರಣೆಯನ್ನಾಗಿ ಆಚರಿಸುತ್ತಾರೆ ಎಂಬ ಅಭಿಪ್ರಾಯವಿದೆ. ಆದರೆ ೧೯೧೦ ಮಾರ್ಚ್ ೮ರಂದು ಅಂತರ ರಾಷ್ಟ್ರೀಯ ಸಮಾಜವಾದಿ ಮಹಿಳಾ ಕಾಂಗ್ರೆಸನ್ನುದ್ದೇಶಿಸಿ ಮಾತನಾಡಿದ ರಷ್ಯದ ಕ್ರಾಂತಿಕಾರಿ ಮಹಿಳೆಯರು 'ಮಹಿಳಾ ದಿನಾಚರಣೆ' ಯನ್ನಾಚರಿಸಬೇಕೆಂದು ಕರೆಯಿತ್ತರು. ಮಹಿಳಾ ದಿನಾಚರಣೆ ಆಚರಿಸುವುದರಿಂದ ವಿಶ್ವಶಾಂತಿಗೆ ಬಲಬರುತ್ತದೆ. ಮಹಿಳೆಯರು ವಿಶ್ವಶಾಂತಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಡುತ್ತಾರೆ. ಪುರುಷರು ವಿನಾಶದ ಹಾದಿಹಿಡಿದಾಗ ಮಹಿಳೆ ವಿಶ್ವಶಾಂತಿಗಾಗಿ ಹೋರಾಡುತ್ತಾಳೆ ಎಂದು ಘೋಷಿಸಿದರು.

೧೯೭೫ನೇ ವರ್ಷವನ್ನು ವಿಶ್ವಸಂಸ್ಥೆ ಅಂತರರಾಷ್ಟ್ರೀಯ ಮಹಿಳಾ ವರ್ಷವೆಂದು ಘೋಷಿಸಿತು. ಅದೇ ವರ್ಷ ಜೂನ್ ೧೯ರಿಂದ ಜುಲೈ ೨ರವರೆಗೆ ಮೆಕ್ಸಿಕೋ ನಗರದಲ್ಲಿ ಅಂತರ ರಾಷ್ಟ್ರೀಯ ಮಹಿಳಾ ಸಮ್ಮೇಳನ ನಡೆಯಿತು. ಮಹಿಳೆಯರ ಅನೇಕ ಸಮಸ್ಯೆಗಳ ಬಗ್ಗೆ ವಿವರವಾಗಿ ಚರ್ಚಿಸಲಾಯಿತು. ಮಹಿಳಾ ಕಲ್ಯಾಣ ಕಾರ್ಯಗಳನ್ನು ಕೈಗೆತ್ತಿಕೊಳ್ಳುವಂತೆ ಸರ್ಕಾರಗಳಿಗೆ ಸೂಚಿಸಲಾಯಿತು.

ಎರಡನೆಯ ಜಾಗತಿಕ ಸಮ್ಮೇಳನ ಕೋಪನ್ ಹೇಗನ್‌ನಲ್ಲಿ ಸೇರಿತು. ಇಲ್ಲಿ ಮಹಿಳೆಯರ ಅನೇಕ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಯಿತಲ್ಲದೆ, ಅವರ ಅಭಿವೃದ್ಧಿಯ ಕುರಿತಾದ ವಿಚಾರ ವಿಮರ್ಶೆಗಳು ನಡೆದವು. ಅಲ್ಲದೆ ಗ್ರಾಮಾಂತರ ಪ್ರದೇಶದ ಹೆಣ್ಣು ಮಕ್ಕಳ ಸೌಲಭ್ಯಕ್ಕೆ ಹೆಚ್ಚು ಗಮನಕೊಡಲು ಸೂಚಿಸಲಾಯಿತು.





ಈ ಎರಡು ಸಮ್ಮೇಳನಗಳ ಫಲಿತಾಂಶ ಪ್ರಗತಿಯತ್ತ ಒಯ್ಯುತ್ತಿದ್ದುದು ಮೂರನೇ ಮಹಿಳಾ ಸಮ್ಮೇಳನಕ್ಕೆ ಸ್ಫೂರ್ತಿಯನ್ನು ಕೊಟ್ಟಿತು. ಮೂರನೆಯ ವಿಶ್ವಮಹಿಳಾ ಸಮ್ಮೇಳನ ನೈರೋಬಿಯಲ್ಲಿ ನೆರವೇರಿತು. ೧೯೮೫ರಲ್ಲಿ ಮುಂದೆ ಹತ್ತು ವರ್ಷಗಳ ನಂತರ ಅಂದರೆ ೧೯೯೫ರಲ್ಲಿ ಬೀಜಿಂಗ್‌ನಲ್ಲಿ ನಾಲ್ಕನೆಯ ವಿಶ್ವಮಹಿಳಾ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿ ವಿಶ್ವದ ಎಲ್ಲ ಕಡೆಗಳಿಂದ ಬಂದ ಸುಮಾರು ೪೦,೦೦೦ ಪ್ರತಿನಿಧಿಗಳು ಭಾಗವಹಿಸಿದ್ದು ಮಹಿಳಾ ಜಾಗೃತಿ ಯಶಸ್ಸಿನತ್ತ ಸಾಗುತ್ತಿರುವುದಕ್ಕೆ ಸಾಕ್ಷಿಯಾಗಿತ್ತು. ಸಮ್ಮೇಳನದಲ್ಲಿ ಮಹಿಳೆಯರಿಗೆ ದೊರೆಯದೆ ಇರುವ ಇನ್ನೂ ಅನೇಕ ಹಕ್ಕುಗಳ ಬಗ್ಗೆ ಚರ್ಚಿಸಲಾಯಿತು. ಕೆಲವರು ಶೋಷಣೆಯ ವಿರುದ್ಧ ತಾವು ಬಂಡಾಯವೆದ್ದಿರುವುದನ್ನು ಪ್ರಬಲವಾಗಿ ಸಮರ್ಥಿಸಿದರು. ಭಾರತ ಸರ್ಕಾರದ ಪರವಾಗಿ ಭಾಗವಹಿಸಿದ್ದ ಸದಸ್ಯರಲ್ಲಿ ಕರ್ನಾಟಕದ ಶ್ರೀಮತಿ ಮಾರ್ಗರೆಟ್ ಆಳ್ವರವರೂ ಸೇರಿದ್ದರು.

ವಿಶ್ವಸಂಸ್ಥೆ ಮಹಿಳೆ ಮತ್ತು ಮಕ್ಕಳ ಸರ್ವಾಂಗೀಣ ಪ್ರಗತಿಗಾಗಿ ಅತ್ಯುತ್ತಮ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಅದರ ಸದಸ್ಯ ರಾಷ್ಟ್ರಗಳು ಕೂಡ ವಿಶ್ವಸಂಸ್ಥೆಯ ನಿರ್ದೇಶನಗಳನ್ನು ಕಾರ್ಯಗತಗೊಳಿಸಲಾಗುತ್ತಿವೆ. ಕಳೆದ ವರ್ಷವನ್ನು (೨೦೦೨) ಮಹಿಳಾ ಸಬಲೀಕರಣ ವರ್ಷವೆಂದು ಘೋಷಿಸಿದ್ದ ವಿಶ್ವಸಂಸ್ಥೆ ಮಹಿಳೆಯರಲ್ಲಿ ಆತ್ಮಶಕ್ತಿ, ಸ್ವಾವಲಂಬನೆ ಮುಂತಾದ ಧೀರೋದ್ಧಾತಗುಣಗಳನ್ನು ತುಂಬಲು ಸಹಕರಿಸಿತು.

ನಮ್ಮ ನಾಡಿನಲ್ಲೂ ಮಹಿಳೆಯರಿಗಾಗಿ ಅನೇಕ ಶೈಕ್ಷಣಿಕ-ಆರ್ಥಿಕ ಯೋಜನೆಗಳನ್ನು ಕಾರ್ಯಗತ ಮಾಡಲಾಗುತ್ತಿದೆ. ಸ್ತ್ರೀ ಶಕ್ತಿ ಯೋಜನೆ, ಸ್ವಸಹಾಯ ಯೋಜನೆ ಮುಂತಾದವುಗಳು, ಅನೇಕ ಸಂಘ-ಸಂಸ್ಥೆಗಳೂ ಮಹಿಳಾ ಜಾಗೃತಿ-ಪ್ರಗತಿಗಾಗಿ ಶ್ರಮಿಸುತ್ತಿವೆ.

ನಗರಗಳಲ್ಲಿನ ಸುಶಿಕ್ಷಿತ, ಉದ್ಯೋಗಸ್ಥ ಮಹಿಳೆಯರು ಸಂವಿಧಾನದತ್ತ ಸ್ವಾತಂತ್ರ್ಯ-ಸಮಾನತೆ ಮುಂತಾದ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿರುವುದು ಗೋಚರಿಸುತ್ತಿದ್ದರೂ, ಸಾಂಪ್ರದಾಯಿಕ ಕುಟುಂಬದ ಹೆಣ್ಣುಮಕ್ಕಳು ಹಾಗೂ ಅವಿದ್ಯಾವಂತರ ಮನೆಯ ಹೆಣ್ಣು ಮಕ್ಕಳ ಬದುಕಿನಲ್ಲಿ ಇನ್ನೂ ಸುಧಾರಣೆಯಾಗಿಲ್ಲ. ಮೊಟ್ಟ ಮೊದಲು ಅವಳು ವಿದ್ಯಾವಂತೆಯಾಗಬೇಕು, ವಿಚಾರಶೀಲೆಯಾಗಬೇಕು. ತನ್ನಲ್ಲಿ ಅಡಗಿರುವ ಶಕ್ತಿಯನ್ನು ಅರಿತುಕೊಳ್ಳಬೇಕು. ತಾನು ಸಬಲೆಯೆಂಬುದನ್ನು ಅರಿಯಬೇಕು. ೧೨ನೇ ಶತಮಾನದ ಮಹಾದೇವಿಯಕ್ಕ ತನ್ನ ಧೀ ಶಕ್ತಿಯನ್ನು ಮೆರೆದು ಸರ್ವರಿಗೂ ಆದರ್ಶಪ್ರಾಯಳಾಗಿದ್ದಾಳೆ. ''ನಾಮದಲಿ ಹೆಂಗೂಸಾದರೇನು? ಭಾವಿಸಲು ಗಂಡುರೂಪು ನೋಡಾ'' – ಎಂಬ ಆತ್ಮಶಕ್ತಿಯ ನುಡಿಗಳನ್ನು ನಮ್ರತೆಯಿಂದ ನುಡಿದು, ನಡೆದು ತೋರಿಸಿದವಳು. ಅಕ್ಕನ ಕೆಚ್ಚು, ಕಲಿತನ ಹೆಣ್ಣು ಮಕ್ಕಳಲ್ಲಿ ಮೂಡಿಬರಬೇಕು.

ಸಂಸ್ಕೃತದ ಸುಭಾಷಿತವೊಂದು ಬಲಹೀನರನ್ನೂ ಬಲಗೊಳ್ಳುವಂತೆ ಹೀಗೆ ಹೇಳುತ್ತದೆ ''ಅಲ್ಪಶಕ್ತಿಯುಳ್ಳ ಬಹಳ ಜನರು ಒಟ್ಟು ಸೇರಿದರೆ ಎಂಥ ಮಹತ್ಕಾರ್ಯವನ್ನಾದರೂ ಸಾಧಿಸಬಲ್ಲರು. ಹೇಗೆಂದರೆ ಹುಲ್ಲು-ಕಡ್ಡಿಗಳು ಬಲವಿಲ್ಲದವು. ಆದರೆ ಅವೇ ಹಗ್ಗದ ರೂಪದಲ್ಲಿ ಒಟ್ಟು ಸೇರಿದರೆ ಮದವೇರಿದ ಆನೆಯನ್ನಾದರೂ ಕಟ್ಟಬಲ್ಲವು.'' ಎಂಬ ಮಾತು ಸದಾ ನಮ್ಮನ್ನು ಎಚ್ಚರಗೊಳಿಸುತ್ತಿದೆ. ❑

## ಪ್ರೌಢಶಾಲೆ ಹಾಗೂ ಕಾಲೇಜು ವಿದ್ಯಾರ್ಥಿಗಳಿಗಾಗಿ ಬಸವಣ್ಣನವರನ್ನು ಕುರಿತ ರಾಜ್ಯಮಟ್ಟದ ಪ್ರಬಂಧ ಸ್ಪರ್ಧೆ

ಬಸವ ಸಮಿತಿಯು ಬಸವಣ್ಣನವರನ್ನು ಕುರಿತು ರಾಜ್ಯಮಟ್ಟದ ಪ್ರಬಂಧ ಸ್ಪರ್ಧೆಯನ್ನು ಕನ್ನಡ, ಹಿಂದಿ ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಪ್ರೌಢಶಾಲೆ ಹಾಗೂ ಕಾಲೇಜು ವಿದ್ಯಾರ್ಥಿಗಳಿಗಾಗಿ ಏರ್ಪಡಿಸಿದೆ. ಒಂದು ಶಾಲೆ/ಕಾಲೇಜಿನಿಂದ ಇಬ್ಬರು ವಿದ್ಯಾರ್ಥಿಗಳು ಭಾಗವಹಿಸಬಹುದಾಗಿದೆ. ಪ್ರೌಢಶಾಲೆ ವಿದ್ಯಾರ್ಥಿಗಳು **''ಬಸವಣ್ಣನವರ ಸಾಮಾಜಿಕ ಸುಧಾರಣೆಗಳು''** ಹಾಗೂ ಕಾಲೇಜು ವಿದ್ಯಾರ್ಥಿಗಳು **''ಇಂದಿನ ಸಮಾಜಕ್ಕೆ ಬಸವತತ್ತ್ವದ ಪ್ರಸ್ತುತತೆ''** ವಿಷಯವನ್ನು ಕುರಿತು (ಎರಡು ಸಾವಿರ ಪದಗಳನ್ನು ಮೀರದ) ಪ್ರಬಂಧ ಬರೆದು ಶಾಲಾ ಮುಖ್ಯೋಪಾಧ್ಯಾಯರು/ಕಾಲೇಜಿನ ಪ್ರಾಂಶುಪಾಲರ ಮುಖಾಂತರ **ದಿನಾಂಕ : ೩೧-೩-೨೦೦೩ರ** ಒಳಗೆ ಪ್ರಧಾನ ಕಾರ್ಯದರ್ಶಿಗಳು, ಬಸವ ಸಮಿತಿ, ಶ್ರೀ ಬಸವೇಶ್ವರ ವೃತ್ತ ಬೆಂಗಳೂರು – ೫೬೦ ೦೦೧ ಇವರಿಗೆ ಕಳುಹಿಸಿಕೊಡುವುದು. ಪ್ರಬಂಧ ಸ್ಪರ್ಧೆ ವಿಜೇತರಿಗೆ ಕ್ರಮವಾಗಿ ಪ್ರೌಢಶಾಲೆ ವಿದ್ಯಾರ್ಥಿಗಳಿಗೆ ರೂ. ೩೦೦೦, ೨೦೦೦, ೧೦೦೦ ಹಾಗೂ ಕಾಲೇಜು ವಿದ್ಯಾರ್ಥಿಗಳಿಗೆ ರೂ. ೫೦೦೦, ೩೦೦೦, ೨೦೦೦ ರೂಪಾಯಿಗಳ ಬಹುಮಾನವನ್ನು ಬಸವ ಜಯಂತಿ ಸಂದರ್ಭದಲ್ಲಿ ನೀಡಲಾಗುವುದು.

# ಶ್ರೀಮಠದಲ್ಲಿ ತುಮಕೂರು ವಲಯ ಪ್ರಥಮ ವೀರಶೈವ ಮಹಿಳಾ ಸಮ್ಮೇಳನ



ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸುತ್ತಿರುವುದು.
ವೇದಿಕೆಯಲ್ಲಿ : ಶ್ರೀಮತಿ ವಸುಂಧರಾ ದಯಾನಂದ, ಶ್ರೀಮತಿ ರೇಣುಕಾ ಪರಮೇಶ್, ಸಮ್ಮೇಳನಾಧ್ಯಕ್ಷೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ಸಚಿವೆ ಶ್ರೀಮತಿ ರಾಣಿ ಸತೀಶ್, ವಿಧಾನಪರಿಷತ್‌ನ ಸದಸ್ಯ ಶ್ರೀ ಎಚ್.ಎನ್. ಶಿವಶಂಕರ್.

''ಇಂದು ಸಂಸ್ಕೃತಿ, ಸಂಸ್ಕಾರ ಕಣ್ಮರೆಯಾಗಿದೆ. ಭ್ರಷ್ಟತೆ ಎಲ್ಲೆಡೆ ವ್ಯಾಪಿಸಿದೆ. ಭವಿಷ್ಯದ ಯುವ ಜನಾಂಗ ಈ ಬಗ್ಗೆ ಎಚ್ಚರವಹಿಸಿ ಒಳ್ಳೆಯ ಮಾರ್ಗದಲ್ಲಿ ನಡೆಯುವುದಾದರೆ ದೇಶದ ಪ್ರಗತಿ ಸಾಧ್ಯ. ಇಲ್ಲವಾದಲ್ಲಿ ಮುದೊಂದು ದಿನ ಭಾರಿ ದೊಡ್ಡ ದುರಂತವನ್ನು ಕಾಣಬೇಕಾಗುತ್ತದೆ. ಜಗತ್ತಿನಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ ಎಂಬ ಎತ್ತರಕ್ಕೆ ವಿಜ್ಞಾನ ಮುಂದುವರಿದಿದ್ದು ಈಗ ಅದರಿಂದಲೇ ಆಪತ್ತು ಎಂಬುದನ್ನು ನಾವೆಲ್ಲರೂ ಮನಗಾಣಬೇಕಾಗಿದೆ. ಅಪಾಯದ ಅಂಚಿನಲ್ಲಿ ನಿಂತಿರುವ ಜಗತ್ತನ್ನು ಕೇವಲ ಇಬ್ಬರಿಂದ ಮಾತ್ರ ರಕ್ಷಿಸಲು ಸಾಧ್ಯ. ಅವರು ಯಾರೆಂದರೆ ತಾಯಿ ಮತ್ತು ಶಿಕ್ಷಕ .

– ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು

''ಭಾರತೀಯ ಸಮಾಜದಲ್ಲಿ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಸಂಘರ್ಷಕ್ಕೆ ಮಹಿಳೆ ಬಲಿಯಾಗಿದ್ದು ಮೊದಲು ತನ್ನನ್ನು ತಾನು ಗುರುತಿಸಿಕೊಳ್ಳುವ ಕಾರ್ಯ ಆಗಬೇಕು. ಭಾರತದಲ್ಲಿ ಮುಂದುವರಿದ ವರ್ಗದ ಮಹಿಳೆಯರು ಕೂಡ ಹಿಂದುಳಿದ ವರ್ಗಗಳ ಪುರುಷರಿಗಿಂತ ಹಿಂದುಳಿದದ್ದು ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಪ್ರಗತಿಗೆ ಮಹಿಳೆಯರು ಮುಂದಾಗಬೇಕು. ಇದಕ್ಕೆ ಅನಿವಾರ್ಯವಾದರೆ ಸಂಘರ್ಷದ ಹಾದಿಯನ್ನೂ ತುಳಿಯಬೇಕು. ವೀರಶೈವಧರ್ಮ ನೀಡಿದಷ್ಟು ಸ್ಥಾನಮಾನವನ್ನು ವಿಶ್ವದ ಯಾವ ಧರ್ಮವೂ ಮಹಿಳೆಯರಿಗೆ ನೀಡಿಲ್ಲ. ಮಹಿಳೆಗೆ ದೈವತ್ವಕ್ಕೆ ಏರುವ ಶಕ್ತಿಯಿದೆ ಎಂದು ಸಾರಿದ ಏಕೈಕ ಧರ್ಮ ವೀರಶೈವ ಧರ್ಮ. ಸಂಸ್ಕಾರವಂತ ಮಹಿಳೆಯರಿಂದಷ್ಟೆ ಸುಸಂಸ್ಕೃತ ಸಮಾಜ ನಿರ್ಮಾಣಸಾಧ್ಯ. ಮಹಿಳೆಯೊಬ್ಬಳು ಕುಟುಂಬವನ್ನು ಸಮರ್ಥವಾಗಿ ನಿಭಾಯಿಸುವ ಶಕ್ತಿ ಪಡೆದುಕೊಂಡಾಗ ರಾಜ್ಯವನ್ನು ಆಳುವ ಶಕ್ತಿಯನ್ನೂ ಪಡೆದು ಕೊಳ್ಳುತ್ತಾಳೆ. ಎಲ್ಲಕ್ಕೂ ಮುಖ್ಯವಾಗಿ ಮಹಿಳೆಯರು ಚಾರಿತ್ರ್ಯ ಶುದ್ಧಿಯ ಮೂಲಕ ಚಿತ್ತಶುದ್ಧಿ ಹೊಂದಿರಬೇಕು. ಸ್ವಾತಂತ್ರ್ಯ ಸ್ವೇಚ್ಛಾಚಾರವಾಗದಂತೆ ಎಚ್ಚರ ವಹಿಸಬೇಕು. ಹಾಳಾದ ಸಮಾಜವನ್ನು ಸರಿಪಡಿಸುವ ಶಕ್ತಿ ಮಹಿಳೆಯರಿಗೆ ಮಾತ್ರ ಇದೆ. ಅಕ್ಕಮಹಾದೇವಿಯಂಥ ಆದರ್ಶಮಹಿಳೆಯನ್ನು ಜಗತ್ತಿಗೆ ನೀಡಿದ್ದು ವೀರಶೈವಧರ್ಮ. ಅಕ್ಕನ ಆದರ್ಶ ಕೇವಲ ಭಾರತೀಯ ಸಮಾಜಕ್ಕೇ ಅಲ್ಲ, ಇಡೀ ವಿಶ್ವದ ಮಹಿಳಾ ಸಮಾಜಕ್ಕೆ ಮಾರ್ಗದರ್ಶಿಯಾಗುವಂಥದ್ದು. ಅಕ್ಕನನ್ನೂ ಸೇರಿದಂತೆ ಬಸವಾದಿ ಶರಣರ ತತ್ವಗಳಿಂದ ಸ್ಫೂರ್ತಿ ಪಡೆದು ಮಹಿಳೆಯರು ಮುಂದೆ ಬರಬೇಕು''.

– ಶ್ರೀಮತಿ ರಾಣಿ ಸತೀಶ್



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಆಶೀರ್ವಚನ

''ವೀರಶೈವರು ಪರಸ್ಪರ ಒಳಜಗಳ ಬಿಟ್ಟು ಒಗ್ಗಟ್ಟಾಗಿ ಸಮಾಜದ ಸಂಘಟನೆಗೆ ಶ್ರಮಿಸಬೇಕು. ಎಲ್ಲ ಒಳಪಂಗಡಗಳೂ ಒಗ್ಗಟ್ಟಾಗಿ ನಾವೆಲ್ಲರೂ ವೀರಶೈವರು ಎಂದು ಹೇಳಿಕೊಳ್ಳುವವರೆಗೆ ಅಭಿವೃದ್ಧಿ ಸಾಧ್ಯವಿಲ್ಲ. ಒಳಪಂಗಡಗಳ ಸಂಘಟನೆ ಬಲಗೊಳ್ಳುತ್ತಿದ್ದು ವಿಘಟನೆಗೆ ಕಾರಣವಾಗಿದ್ದು ಎಲ್ಲರೂ ಒಂದೇ ಎಂಬ ಮನೋಭಾವ ಬೆಳೆಸಿಕೊಂಡು ಒಗ್ಗೂಡದಿದ್ದರೆ ಮುಂದಿನ ಯುವಪೀಳಿಗೆ ಶಾಪಹಾಕುವಂತಾಗುತ್ತದೆ. ಒಳಪಂಗಡಗಳಲ್ಲಿ ಪರಸ್ಪರ ರಕ್ತ ಸಂಬಂಧ ಬೆಳೆಸುವ ಮೂಲಕ ಮಧ್ಯೆಯಿರುವ ಗೋಡೆಗಳನ್ನು ಕಿತ್ತೊಗೆಯಲು ಮುಂದಾಗಬೇಕು. ಶರಣ ಸಂಸ್ಕೃತಿಯ ಆಚರಣೆಗೆ ಆದ್ಯತೆ ನೀಡಬೇಕು. ಅತ್ಯಂತ ಉತ್ತಮವಾದ ವೀರಶೈವ ಸಿದ್ಧಾಂತಗಳನ್ನು ಮರೆತು ವೈದಿಕ ಸಂಸ್ಕೃತಿಗೆ ಜೋತು ಬೀಳುತ್ತಿರುವುದು ವಿಷಾದನೀಯ. ಸರಳ ವಿವಾಹ ಸಂಸ್ಕೃತಿಯನ್ನು ಮರೆತ ವೀರಶೈವ ಸಮಾಜ ಇಂದು ಅದ್ದೂರಿ ವಿವಾಹಗಳಿಗೆ ಆದ್ಯತೆ ನೀಡಿ ತತ್ವವನ್ನು ಗಾಳಿಗೆ ತೂರುತ್ತಿರುವುದು ಉಚಿತವಾದುದಲ್ಲ. ವೀರಶೈವಧರ್ಮದಲ್ಲಿ ಮಹಿಳೆಯರಿಗೆ ಎಲ್ಲ ಸ್ತರಗಳಲ್ಲಿ ಸಮಾನ ಅವಕಾಶ ಕಲ್ಪಿಸಲಾಗಿದ್ದು ಇಂಥ ತತ್ವದ ಶ್ರೇಷ್ಠತೆಯನ್ನು ಅರ್ಥಮಾಡಿಕೊಳ್ಳಬೇಕು. ಮಹಿಳೆ ವೈಚಾರಿಕತೆ ಬೆಳೆಸಿಕೊಳ್ಳಲು ಪುರುಷರ ಸಹಕಾರವೂ ಅಗತ್ಯ. ಮಹಿಳೆಯರು ತಮ್ಮನ್ನು ಹಿಂದಿಕ್ಕುತ್ತಾರೆ ಎಂಬ ಭೀತಿ ಪುರುಷವರ್ಗಕ್ಕೆ ಬೇಡ''.

– ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್



ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಚನ




ಸಮ್ಮೇಳನಾಧ್ಯಕ್ಷೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರಿಂದ ಭಾಷಣ

**ಈ** ಉಲ್ಲೇಖಿತ ನುಡಿಗಳು ಹೊರಬಂದದ್ದು ಕ್ಯಾತ್ಸಂದ್ರದ ವೀರಶೈವ ಮಹಿಳಾ ಸಮಾಜ (ರಿ.)ದವರು ದಿನಾಂಕ ೭-೧-೨೦೦೩ರ ಮಂಗಳವಾರ ಶ್ರೀ ಸಿದ್ಧಗಂಗಾ ಮಠದ ಶ್ರೀ ಉದ್ದಾನೇಶ್ವರ ಸಮುದಾಯ ಭವನದಲ್ಲಿ ಜರುಗಿದ ತುಮಕೂರು ವಲಯ ಪ್ರಥಮ ವೀರಶೈವ ಮಹಿಳಾ ಸಮ್ಮೇಳನದಲ್ಲಿ.

**ಪ**ರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಮಾಜಿ ಸಚಿವರಾದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರ ಸಮ್ಮೇಳನಾಧ್ಯಕ್ಷತೆಯಲ್ಲಿ, ಸಚಿವರಾದ ಶ್ರೀಮತಿ ರಾಣಿ ಸತೀಶ್ ಅವರು ಸಮ್ಮೇಳನವನ್ನು ಉದ್ಘಾಟಿಸಿದರು.

ವಿಧಾನಪರಿಷತ್ ಸದಸ್ಯರಾದ ಶ್ರೀ ಹೆಚ್.ಎಸ್. ಶಿವಕುಮಾರ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

**ಸ**ಮ್ಮೇಳನದ ಅಂಗವಾಗಿ ಏರ್ಪಡಿಸಿದ್ದ ಧಾರ್ಮಿಕ ಗೋಷ್ಠಿಯಲ್ಲಿ ಚಿಕ್ಕತೊಟ್ಲುಕೆರೆ ಸುಕ್ಷೇತ್ರ ಶ್ರೀ ಅಟವಿ ತಪೋವನದ ಅಧ್ಯಕ್ಷರಾದ ಪೂಜ್ಯ ಶ್ರೀ ಅಟವಿ ಶಿವಲಿಂಗಸ್ವಾಮಿಗಳವರ ಸಾನ್ನಿಧ್ಯದಲ್ಲಿ ಮೈಸೂರಿನ ಕನ್ನಡ ಪ್ರಾಧ್ಯಾಪಕಿ ಶ್ರೀಮತಿ ಜಗದಾಂಬ ಮಲ್ಲೇದೇವರ ಅಧ್ಯಕ್ಷತೆಯಲ್ಲಿ, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನ ಕನ್ನಡ ಪ್ರಾಧ್ಯಾಪಕಿ ಶ್ರೀಮತಿ ಸುಮಂಗಳಮ್ಮ ಅವರು ವೀರಶೈವ ಧರ್ಮದ ಮಹತ್ವವನ್ನು ಅದರಲ್ಲಿಯೂ ವೀರಶೈವ ಮಹಿಳೆಯರು ಆಚರಿಸಬೇಕಾದ ಶರಣತತ್ವಗಳನ್ನು ಪರಿಚಯ ಮಾಡಿಕೊಟ್ಟರು.

ವೀರಶೈವ ಮಹಿಳೆ ಮತ್ತು ಸಂಘಟನೆಯ ಗೋಷ್ಠಿಯ ಸಾನ್ನಿಧ್ಯ ತುಮಕೂರು ಹಿರೇಮಠದ ಪೂಜ್ಯ ಡಾ. ಶ್ರೀ ಶ್ರೀ ಶಿವಾನಂದ ಶಿವಾಚಾರ್ಯರು ವಹಿಸಿದ್ದರು. ಬೆಂಗಳೂರಿನ ನ್ಯಾಯವಾದಿಗಳಾದ ಶ್ರೀಮತಿ ಪ್ರಮೀಳಾ ನೇಸರ್ಗಿಯವರು ಅಧ್ಯಕ್ಷತೆ ವಹಿಸಿದ್ದ ಈ ಗೋಷ್ಠಿಯಲ್ಲಿ ತುಮಕೂರಿನ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನ ಕನ್ನಡ ಪ್ರಾಧ್ಯಾಪಕಿ ಶ್ರೀಮತಿ ಅಮೃತಾ ವೀರಭದ್ರಯ್ಯನವರು ವೀರಶೈವ ಮಹಿಳೆಯರು ಸಂಘಟಿತರಾಗಬೇಕಾದ ಅಗತ್ಯ ಹಾಗೂ ಅನಿವಾರ್ಯತೆಗಳನ್ನು ಒತ್ತಿ ಹೇಳಿದರು.



ಬೇಲಿಮಠದ ಶ್ರೀ ಶ್ರೀ ಶಿವರುದ್ರ ಸ್ವಾಮಿಗಳವರಿಂದ ಆಶೀರ್ವಚನ.
ವೇದಿಕೆಯಲ್ಲಿ : ಶ್ರೀಮತಿ ಲಲಿತಾ ಶಿವಮೂರ್ತಿ, ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ಶ್ರೀಮತಿ ಪ್ರೇಮಾಮಲ್ಲಣ್ಣ, ಪೂಜ್ಯ ಶ್ರೀ ಶ್ರೀ ವಲಯ ಶಾಂತಮೂರ್ತಿ ದೇಶಿಕೇಂದ್ರ ಸ್ವಾಮಿಗಳು, ಶ್ರೀಮತಿ ನಾಗರತ್ನಮ್ಮ ಮತ್ತು ಶ್ರೀಮತಿ ರೇಣುಕಾ ಪರಮೇಶ್







ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳವರಿಂದ ಉಪನ್ಯಾಸ.
ವೇದಿಕೆಯಲ್ಲಿ : ಶ್ರೀಮತಿ ಅಮೃತ ವೀರಭದ್ರಯ್ಯ, ಶ್ರೀಮತಿ ಪ್ರಮೀಳಾ ನೇಸರ್ಗಿ ಮತ್ತು ಶ್ರೀಮತಿ ರೇಣುಕಾ ಪರಮೇಶ್

**ಸ**ಮಾಜ ಚಿಂತನಗೋಷ್ಠಿಯಲ್ಲಿ ಬೆಂಗಳೂರಿನ ಬೇಲಿಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ಸಾನ್ನಿಧ್ಯವನ್ನು ವಹಿಸಿದ್ದರು. ತುಮಕೂರಿನ ನಿವೃತ್ತ ಶಿಕ್ಷಕಿ ಶ್ರೀಮತಿ ಪ್ರೇಮಾ ಮಲ್ಲಣ್ಣ ಅಧ್ಯಕ್ಷರಾಗಿದ್ದು, ತುಮಕೂರಿನ ಶ್ರೀಮತಿ ನಾಗರತ್ನಮ್ಮ ಚಂದ್ರಪ್ಪನವರು ವೀರಶೈವ ಸಮಾಜ ಮುನ್ನಡೆಯಬೇಕಾದ ಸಂದರ್ಭದಲ್ಲಿ ಮಹಿಳೆಯ ಕರ್ತವ್ಯಗಳೇನು ಎಂಬುದನ್ನು ತಿಳಿಸಿದರು.

**ಶಿ**ವಗಂಗಾ ಕ್ಷೇತ್ರದ ಮೇಲಣಗವಿ ಮಠದ ಪೂಜ್ಯ ಶ್ರೀಗಳಾದ ಶ್ರೀಮಲಯ ಶಾಂತಮುನಿ ದೇಶಿಕೇಂದ್ರಸ್ವಾಮಿಗಳು ಸಾನ್ನಿಧ್ಯ ವಹಿಸಿದ್ದು ಸಾಹಿತ್ಯಗೋಷ್ಠಿಯ ಅಧ್ಯಕ್ಷತೆ ತುಮಕೂರಿನ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀಮತಿ ಎಸ್. ಅನಸೂಯನವರದಾಗಿತ್ತು. ಉಪನ್ಯಾಸವನ್ನು ನೀಡಿದ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನ ಕನ್ನಡ ಪ್ರಾಧ್ಯಾಪಕಿ ಶ್ರೀಮತಿ ದಾಕ್ಷಾಯಣಮ್ಮ – ಸಾಹಿತ್ಯ ಸಂಸ್ಕೃತಿಯನ್ನು ಸಂವರ್ಧಿಸುವುದಾದಾಗ ಸಾರ್ಥಕವಾಗುತ್ತದೆ. ವೀರಶೈವ ಮಹಿಳೆ ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಮಹತ್ವದ್ದಾಗಿದೆ ಎಂದರು.

**ಶ್ರೀ** ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಸಾನ್ನಿಧ್ಯವಹಿಸಿದ್ದ ಮುಕ್ತಾಯ ಸಮಾರಂಭದಲ್ಲಿ ಸಮ್ಮೇಳನಾಧ್ಯಕ್ಷರಾದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಮಹಿಳೆ ಸಮಾಜದ ಕಣ್ಣು. ಪುರುಷನ ಭಾಗ್ಯ ಮಹಿಳೆಯ ಪ್ರಗತಿಯಲ್ಲಿ ಧರ್ಮದ ಬೆಳಕಿರಬೇಕೆಂಬ ಮಾತುಗಳನ್ನಾಡಿದರು.

**ಕ್ಯಾ**ತ್ಸಂದ್ರದ ವೀರಶೈವ ಮಹಿಳಾ ಸಮಾಜದ ತಾಯಂದಿರು ಶ್ಲಾಘನೀಯ ಕೆಲಸಮಾಡಿದ್ದಾರೆ. ಸಂಘ ಸ್ಥಾಪನೆಯಾದ ಒಂದೂವರೆ ವರ್ಷಾವಧಿಯಲ್ಲಿಯೇ ಎಲ್ಲರೂ ಗಮನಿಸುವಂತೆ ವೀರಶೈವ ಮಹಿಳಾ ಸಮ್ಮೇಳನವನ್ನು ಹಮ್ಮಿಕೊಂಡು ಸಮಾಜದ ಜಾಗೃತಿಗೆ ಚಾಲನೆ ನೀಡಿದ್ದಾರೆ ಎಂದು ಕಿರಿಯ ಶ್ರೀಗಳು ನುಡಿದರು.

**ಮು**ಕ್ತಾಯ ಸಮಾರಂಭದಲ್ಲಿ ಕೈಗಾರಿಕೋದ್ಯಮಿಗಳಾದ ಶ್ರೀ ಎನ್.ಆರ್. ಜಗದೀಶ್, ತುಮಕೂರು ನಗರಸಭೆಯ ಉಪಾಧ್ಯಕ್ಷಿಣಿ ಶ್ರೀ ಟಿ.ಸಿ. ಕಲ್ಪನ, ಶ್ರೀ ಬಸವೇಶ್ವರ ಪತ್ತಿನ ಸಹಕಾರ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಓಹಿಲೇಶ್ ಮಾತನಾಡಿದರು.

**ಗ**ಣ್ಯರಿಗೆ ಸನ್ಮಾನ ಮಾಡಲಾಯಿತು. ಸಮ್ಮೇಳನದ ಯಶಸ್ಸಿಗೆ ವಿಶೇಷವಾಗಿ ಶ್ರಮಿಸಿದ ಸಮಾಜದ ಕಾರ್ಯದರ್ಶಿಗಳಾದ ಶ್ರೀಮತಿ ರೇಣುಕಾ ಪರಮೇಶ್ ವಂದಿಸಿದರು. ಅಧ್ಯಕ್ಷರಾದ ಶ್ರೀಮತಿ ಲಲಿತಾ ಶಿವಮೂರ್ತಿಯವರು ಸ್ವಾಗತಿಸಿದರು. ಕಾರ್ಯಕ್ರಮವನ್ನು ಶ್ರೀ ಹೆಚ್.ವಿ. ವೀರಭದ್ರಯ್ಯ ನಿರೂಪಿಸಿದರು.

**ವ್ಯ**ವಸ್ಥಿತವಾಗಿ ನಡೆದ ಸಮ್ಮೇಳನ ಸರ್ವರ ಮೆಚ್ಚುಗೆ ಪಡೆಯಿತು.

❀

### ಶ್ರೀವಾಣಿ

**ಮಾನವತ್ವದ ಸಂಪಾದನೆ ಜೀವನದಲ್ಲಿ ಮೊದಲ ಹಂತ. ಆ ಹಂತ ಮುಟ್ಟಿದ ಮೇಲೆ ಅದರಲ್ಲೇ ಅವನು ತೃಪ್ತನಾಗಬಾರದು. ಅವನ ಅಂತಿಮ ಗುರಿ ಮಾನವತ್ವ ಮೀರಿ ದೈವತ್ವ ಸಂಪಾದನೆ ಮಾಡುವುದಾಗಿರಬೇಕು. ಜೀವನೇ ಶಿವನಾಗುವುದು, ಬ್ರಹ್ಮವಾಗುವುದು, ಅಂಗವೇ ಲಿಂಗವಾಗುವುದು.**

# ಮಾನವೀಯ ಮೌಲ್ಯ ರಕ್ಷಣೆಯಲ್ಲಿ ಮಠಗಳ ಪಾತ್ರ ಮಹತ್ವದ್ದು




ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

"ಶಿಕ್ಷಣ ದೂರದೃಷ್ಟಿ ಹಾಗೂ ಮಾನವೀಯ ಮೌಲ್ಯ ರಕ್ಷಣೆಯಲ್ಲಿ ಮಠಮಾನ್ಯಗಳ ಪಾತ್ರ ಎಲ್ಲರಿಗೂ ಪ್ರೇರಣೆ" ಎಂದು ರಾಜ್ಯಪಾಲ ಶ್ರೀ ಟಿ.ಎನ್. ಚತುರ್ವೇದಿ ಅವರು ಅಭಿಪ್ರಾಯಪಟ್ಟರು.

ಸಿದ್ಧಗಂಗಾ ತಾಂತ್ರಿಕ ಕಾಲೇಜು ಆವರಣದಲ್ಲಿ ನೂತನವಾಗಿ ನಿರ್ಮಿಸಿರುವ ಸ್ನಾತಕೋತ್ತರ ಆಡಳಿತ ನಿರ್ವಹಣಾ ಅಧ್ಯಯನ ಕೇಂದ್ರದ ಕಟ್ಟಡವನ್ನು ರಾಜ್ಯಪಾಲರು ಮಾರ್ಚಿ ೬ರಂದು ಉದ್ಘಾಟಿಸಿ ಮಾತನಾಡಿದರು.

ಕಳೆದ ಐವತ್ತು ವರ್ಷಗಳಲ್ಲಿ ಗತಿಸಿದ ಘಟನೆಗಳಿಗೆ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸಾಕ್ಷೀಭೂತರಾಗಿದ್ದಾರೆ. ಸ್ವಾಮೀಜಿ ಅವರ ಆದರ್ಶ ಹಾಗೂ ತತ್ವ ಅನುಕರಣೀಯವಾಗಿದೆ ಎಂದು ಮುಕ್ತಕಂಠದಿಂದ ಶ್ಲಾಘಿಸಿದರು.

ಸ್ವತಂತ್ರ ಬಂದ ಹೊಸತರಲ್ಲಿ ಕೈಗಾರಿಕೆಗಳ ಅಭಿವೃದ್ಧಿಗೆ ಹೆಚ್ಚು ಒತ್ತು ನೀಡಲಾಗುತ್ತಿತ್ತು. ಈಗ ಅದಕ್ಕೆ ಪೂರಕವಾಗಿ ಬದಲಾವಣೆಗೆ ತಕ್ಕಂತೆ ಶಿಕ್ಷಣಕ್ಕೆ ಒತ್ತು ನೀಡಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿದೆ ಎಂದು ನುಡಿದರು.

ಉನ್ನತ ಶಿಕ್ಷಣ ಸಚಿವ ಡಾ. ಜಿ. ಪರಮೇಶ್ವರ ಅವರು ಜಾಗತೀಕರಣದ ಹಿನ್ನೆಲೆಯಲ್ಲಿ ಇಡೀ ಪ್ರಪಂಚ ಭಾರತದತ್ತ ಗಮನ ಹರಿಸಿದೆ. ದೇಶದಲ್ಲಿ ಲಭ್ಯವಿರುವ ಮಾನವ ಸಂಪನ್ಮೂಲ ಬಳಕೆಗೆ ಹೊಸ ಆಡಳಿತ ನಿರ್ವಹಣಾ ವಿಷಯಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ಜಾರಿಗೆ ತರಬೇಕು. ಆಡಳಿತ ನಿರ್ವಹಣಾ ವಿಷಯ ಬೋಧಿಸುವ ಶಿಕ್ಷಣ ಸಂಸ್ಥೆಗಳ ಗುಣಮಟ್ಟ ಹೆಚ್ಚಿಸಬೇಕು. ಜತೆಗೆ ಈ ಶಿಕ್ಷಣ ಸಂಸ್ಥೆಗಳಿಗೆ ಸ್ವಾಯತ್ತ ಸ್ಥಾನಮಾನ ನೀಡಬೇಕು. ಇದರಿಂದ ಸ್ಥಳೀಯ ಆದ್ಯತೆಗನುಸಾರ ಪಠ್ಯಕ್ರಮ ರೂಪಿಸಲು ಅನುಕೂಲ ಮಾಡಿಕೊಟ್ಟಂತಾಗುತ್ತದೆ ಎಂದು ತಿಳಿಸಿದರು.







ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಟಿ.ಎನ್. ಚತುರ್ವೇದಿ ಅವರಿಂದ ಉದ್ಘಾಟನಾ ಭಾಷಣ



ಡಾ. ಎಂ.ಎನ್. ಚನ್ನಬಸಪ್ಪ ಅವರಿಂದ ಸ್ವಾಗತ

೨೦೦೧ರ ವೇಳೆಗೆ ಪ್ರಪಂಚದ ಮೂರು ಆರ್ಥಿಕ ಉಜ್ವಲ ದೇಶಗಳಲ್ಲಿ ಭಾರತ ಒಂದಾಗಲಿದೆ ಎಂದು ಭವಿಷ್ಯ ನುಡಿದರು.

ಆಡಳಿತ ಮಂಡಳಿ ಅಧ್ಯಕ್ಷ ಶ್ರೀ ಬಾಬು ಎನ್. ಕಲ್ಯಾಣಿ ಅವರು ಉದಾರೀಕರಣದಿಂದಾಗಿ ಭಾರತ ಜಾಗತಿಕ ಆರ್ಥಿಕ ವ್ಯವಸ್ಥೆಯಲ್ಲಿ ಒಂದಾಗಿದೆ. ಇದರಿಂದ ಅವಕಾಶಗಳು ನೂರುಪಟ್ಟು ಹೆಚ್ಚಿವೆ ಎಂದರು.

ಸಮಾರಂಭದ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು 'ಶಿಕ್ಷಣ ಎಲ್ಲರಿಗೂ ದೊರೆಯುವಂತಾಗಬೇಕು. ವ್ಯಕ್ತಿಗಳು ಉದಾತ್ತ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿ ಕೊಳ್ಳಬೇಕು' ಎಂದು ತಮ್ಮ ಆಶೀರ್ವಚನದಲ್ಲಿ ತಿಳಿಸಿದರು.

ಸಂಸ್ಥೆ ನಿರ್ದೇಶಕಿ ಶ್ರೀಮತಿ ಮಾಲತಿ ಬೋಳಾರ್ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಪ್ರಾಂಶುಪಾಲ ಡಾ. ಎಂ.ಎನ್. ಚನ್ನಬಸಪ್ಪ ಅವರು ಸ್ವಾಗತಿಸಿದರು.

ಜಿಲ್ಲಾಧಿಕಾರಿ ಶ್ರೀ ಮಲ್ಲಿಕಾರ್ಜುನ ಬಿ. ದ್ಯಾಬೇರಿ ಹಾಗೂ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಆರ್. ಹಿತೇಂದ್ರ ಅವರು ಪಾಲ್ಗೊಂಡಿದ್ದರು.



ಪ್ರೇಕ್ಷಕರು

## ಶ್ರೀ ಸಿದ್ಧರಾಮೇಶ್ವರ ಜಯಂತಿ

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಶಾಸಕರಾದ ಶ್ರೀ ಸುರೇಶ್‌ಬಾಬು, ತಮ್ಮಡಿಹಳ್ಳಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು, ಬೆಟ್ಟದಹಳ್ಳಿಯ ಶ್ರೀ ಚಂದ್ರಶೇಖರ ಸ್ವಾಮಿಗಳು, ಲೋಕಸಭಾ ಸದಸ್ಯ ಶ್ರೀ ಜಿ.ಎಸ್. ಬಸವರಾಜ್, ಶಾಸಕ ಶ್ರೀ ಷಡಕ್ಷರಿ ಮೊದಲಾದವರನ್ನು ಕಾಣಬಹುದು.

ಚಿಕ್ಕನಾಯಕನಹಳ್ಳಿ ತಾಲ್ಲೂಕು ತಮ್ಮಡಿಹಳ್ಳಿಯ ಮಲ್ಲಿಕಾರ್ಜುನ ಸ್ವಾಮಿ ಬೆಟ್ಟದ ತಪ್ಪಲಿನಲ್ಲಿ ಗುರು ಸಿದ್ಧರಾಮೇಶ್ವರರ ಜಯಂತಿ ಮಹೋತ್ಸವ ಸಡಗರ, ಸಂಭ್ರಮದಿಂದ ಜನವರಿ ೧೪ರಂದು ನಡೆಯಿತು.

ತಮ್ಮಡಿಹಳ್ಳಿ ಕ್ಷೇತ್ರದ ಶ್ರೀ ಶ್ರೀ ಮಲ್ಲಿಕಾರ್ಜುನ ದೇಶೀಕೇಂದ್ರ ಸ್ವಾಮೀಜಿ ಅವರ ನೇತೃತ್ವದಲ್ಲಿ ಧ್ವಜಾರೋಹಣ ನೆರವೇರಿಸುವ ಮೂಲಕ ಸಮಾರಂಭಕ್ಕೆ ವಿಧ್ಯುಕ್ತವಾಗಿ ಚಾಲನೆ ನೀಡಿದರು.

ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮಡಿಹಳ್ಳಿ ಮಠಾಧ್ಯಕ್ಷರ ರಜತ ಮಹೋತ್ಸವದ ನೆನಪಿನ 'ಸಿದ್ಧಮಾನಸ ಸಂಸ್ಕೃತಿ ಕೇಂದ್ರ'ವನ್ನು ಉದ್ಘಾಟಿಸಿ ಆಶೀರ್ವಚನ ನೀಡಿದರು. ಅವರು ತಮ್ಮ ಆಶೀರ್ವಚನದಲ್ಲಿ ಶಿಕ್ಷಣ ಮತ್ತು ದಾಸೋಹಗಳಿಗೆ ಹೆಚ್ಚು ಗಮನ ಹರಿಸಿ ಉನ್ನತ ಮಟ್ಟಕ್ಕೆ ಬೆಳೆಯಲಿ'' ಎಂದು ಹಾರೈಸಿದರು.

''೧೨ನೇ ಶತಮಾನದಲ್ಲಿ ಶರಣರು, ಧರ್ಮಗುರುಗಳ ಮಾರ್ಗದರ್ಶನದಿಂದ ಬಸವಣ್ಣ ಮತ್ತು ಸಿದ್ಧರಾಮೇಶ್ವರರು ಜಗತ್ತಿಗೆ ಉತ್ತಮ ಮಾರ್ಗದರ್ಶನ ನೀಡಿದರು. ಗೊಂದಲದಿಂದ ಮನುಷ್ಯನ ಬದುಕು ಭಯಾನಕವಾಗಿದೆ. ಇದರಿಂದ ಪ್ರಪಂಚ ಗೊಂದಲದ ಗೂಡಾಗಿದೆ'' ಎಂದು ವಿಷಾದಿಸಿದರು.

ಶಾಸಕ ಶ್ರೀ ಕೆ. ಷಡಕ್ಷರಿ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ, ವಿಧಾನ ಪರಿಷತ್ ಸದಸ್ಯ ಶ್ರೀ ಎಸ್. ಚನ್ನಬಸವಯ್ಯ ಮಾತನಾಡಿದರು. ಮಲ್ಲಿಕಾರ್ಜುನ ದೇಶೀಕೇಂದ್ರ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು. ವೀರಶೈವ ಸಮಾಜದ ಮುಖಂಡರಾದ ಶ್ರೀ ಎಸ್. ಮಹದೇವಯ್ಯ, ಶ್ರೀ ಎಂ.ಪಿ. ಶಿವಕುಮಾರ್, ಶ್ರೀ ಕಾಂತರಾಜು, ಶ್ರೀ ಎಚ್.ಸಿ. ಪರಮಶಿವಯ್ಯ, ತಾ.ಪಂ. ಉಪಾಧ್ಯಕ್ಷ ಶ್ರೀ ಲೋಕೇಶ್ ಮೂರ್ತಿ, ಸದಸ್ಯ ಶ್ರೀ ಸಿದ್ಧರಾಮಣ್ಣ, ಕುಪ್ಪೂರೂ ಗ್ರಾಮ ಪಂಚಾಯತಿ ಅಧ್ಯಕ್ಷ ಶ್ರೀ ಶಂಕರಪ್ಪ ಹಾಗೂ ಅಗಸರಹಳ್ಳಿ ಶ್ರೀ ಸಿದ್ಧರಾಮಯ್ಯ ಅವರು ಪಾಲ್ಗೊಂಡಿದ್ದರು. ಶ್ರೀ ಶಿವರುದ್ರಪ್ಪ ಸ್ವಾಗತಿಸಿದರು. ಶ್ರೀ ರಾಮಲಿಂಗಪ್ಪ ನಿರೂಪಿಸಿದರು. ಶ್ರೀ ಮಲ್ಲಿಕಾರ್ಜುನಯ್ಯ ವಂದಿಸಿದರು.





## ವೈಭವಪೂರ್ಣ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವ

ಶ್ರೀ ಸಿದ್ಧಗಂಗಾ ಮಠದಲ್ಲಿ ದಿನಾಂಕ ೨.೩.೨೦೦೩ರ ಭಾನುವಾರದಂದು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಮಹಾ ರಥೋತ್ಸವವು ಅಭೂತಪೂರ್ವವಾಗಿ ನಡೆಯಿತು. ನಾಡಿನ ಮೂಲೆ ಮೂಲೆಗಳಿಂದ ಬಂದಿದ್ದ ಸಹಸ್ರಾರು ಜನ ಭಕ್ತಾದಿ ಗಳು ರಥೋತ್ಸವದಲ್ಲಿ ಭಾಗಿಗಳಾಗಿ ಭಕ್ತಿಸಮರ್ಪಣೆ ಮಾಡಿದರು.

ಧಾರ್ಮಿಕ ಲಾಂಛನಗಳಾದ ನಂದಿಧ್ವಜ, ವೀರಗಾಸೆ, ಮಂಗಳ ವಾದ್ಯಗಳು, ಮಕರತೋರಣ, ಕಲಶ-ಕನ್ನಡಿ, ಶಿವಲಾಂಛನಗಳೊಂದಿಗೆ ೧೧.೩೦ಕ್ಕೆ ಪ್ರಾರಂಭವಾದ ರಥೋತ್ಸವವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ವಿಧ್ಯುಕ್ತವಾಗಿ ಚಾಲನೆಗೊಳಿಸಿದರು. ಅನೇಕ ಹರಗುರು ಚರಮೂರ್ತಿಗಳು ರಥೋತ್ಸವದಲ್ಲಿ ಭಾಗಿಗಳಾಗುವ ಮೂಲಕ ಕಾರ್ಯಕ್ರಮಕ್ಕೆ ಪಾವಿತ್ರತೆಯನ್ನು ತಂದುಕೊಟ್ಟರು. ಭಕ್ತಾದಿಗಳು ತಮ್ಮ ಭಕ್ತಿಯ ಸಾಂಕೇತಿಕ ಕುರುಹಾಗಿ ದವನ, ಬಾಳೆಹಣ್ಣುಗಳನ್ನು ಭಕ್ತಿಯಿಂದ ಎಸೆಯುತ್ತಿದ್ದುದು ಆಕರ್ಷಕವಾಗಿ ಕಾಣುತ್ತಿದ್ದಿತು. ಜೊತೆಗೆ ಆಕರ್ಷಕ ಮದ್ದಿನ ಪ್ರದರ್ಶನವು ಇದ್ದಿತು. ಬಿಸಿಲಿನ ಝಳಕ್ಕೆ ಬಾಯಾರಿದ ಭಕ್ತರಿಗೆ ತಂಪು ಪಾನೀಯವನ್ನು ನೀಡುವ ವ್ಯವಸ್ಥೆ ಮಾಡಲಾಗಿದ್ದಿತು.

ರಥೋತ್ಸವ ಭಕ್ತಿ ಸೇವೆ, ತ್ಯಾಗಗಳು ಸಾಕಾರಗೊಳ್ಳುವ ಆಚರಣೆ. ಮಾನವೀಯತೆಯನ್ನು ಪ್ರದರ್ಶಿಸುವ ಮಹಾಮಂಗಳ ಮಣಿಹ ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀಗಳವರು ದಿವ್ಯ ಸಂದೇಶ ನೀಡಿದರು. ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಎಂ.ಬಿ. ದ್ಯಾಬೇರಿ ಮತ್ತು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಹಿತೇಂದ್ರ ನೇತೃತ್ವದಲ್ಲಿ ಜನಸಾಗರ ಮಧ್ಯೆ ಭಕ್ತಿಯ ಜಯಘೋಷಗಳ ನಡುವೆ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಮಹಾರಥೋತ್ಸವ ವಿಜೃಂಭಣೆಯಿಂದ ನಡೆಯಿತು. ಧನ್ಯಮಿಲನ ಸಮಾರಂಭವೆನಿಸಿ ಸಂತೋಷವನ್ನುಂಟು ಮಾಡಿತು.

ನಗರಪಾಲಿಕೆಯ ಆಡಳಿತವರ್ಗ ಹಾಗೂ ಸಿಬ್ಬಂದಿಯವರ ಸಹಕಾರಗಳು ಸ್ಮರಣೀಯ. ಶಾಂತಿಪಾಲನೆಯಲ್ಲಿ ಪೊಲೀಸ್ ಇಲಾಖೆಯವರು ಸಹಕರಿಸಿದರು. ಶ್ರೀಮಠದ ಸೇವಾಸಿಬ್ಬಂದಿ ಹಾಗೂ ವಿದ್ಯಾರ್ಥಿಗಳು ಜಾತ್ರಾರ್ಥಿಗಳಾಗಿ ಬಂದ ಸಾರ್ವಜನಿಕರನ್ನು ಪ್ರೀತ್ಯಾದಾರಗಳಿಂದ ಉಪಚರಿಸಿದರು. ಜಾತ್ರೆಯಲ್ಲಿ ಭಾಗವಹಿಸಿದವರೆಲ್ಲರಿಗೂ ಸಿಹಿ ಊಟದೊಂದಿಗೆ ದಾಸೋಹ ವ್ಯವಸ್ಥೆ ಮಾಡಲಾಗಿತ್ತು.

ಮದರಾಸು – ಆಂಧ್ರಪ್ರದೇಶ ಗಡಿಭಾಗಗಳ ಭಕ್ತಾದಿಗಳು ರಥೋತ್ಸವದಲ್ಲಿ ಭಾಗಿಗಳಾಗಿ ಭಕ್ತಿಸಮರ್ಪಣೆಯ ದೃಶ್ಯ ಹೆಚ್ಚು ಕಳೆ ತಂದಿತ್ತು.

## ಹನ್ನೆರಡನೇ ಶತಮಾನದ ಅನುಭವಮಂಟಪ : ಶ್ರೀ ಸಿದ್ಧಗಂಗಾ ಕ್ಷೇತ್ರ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ಅಂತರ್‌ಜಲ ಅಭಿವೃದ್ಧಿ ಕೆಲಸಕ್ಕೆ ಹೆಚ್ಚು ಮಹತ್ವ ನೀಡುವ ತುರ್ತು ಅಗತ್ಯ ಪ್ರಸ್ತುತ ದಿನಗಳಲ್ಲಿ ಕಾಣುತ್ತಿದ್ದು, ಅದಕ್ಕಾಗಿ ಜಲಾನಯನ ಅಭಿವೃದ್ಧಿ ಯೋಜನೆಯಡಿ ಜಿಲ್ಲೆಯಲ್ಲಿ ೩೦ ಕೋಟಿ ರೂ.ಗಳಷ್ಟು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ ಎಂದು ಕೃಷಿ ಸಚಿವ ಶ್ರೀ ವಿ.ಎಸ್. ಕೌಜಲಗಿ ಅವರು ತಿಳಿಸಿದರು.

ಸಚಿವರು ಫೆಬ್ರವರಿ ೧೯ರಂದು ಸಿದ್ಧಗಂಗಾ ಕ್ಷೇತ್ರದಲ್ಲಿ ೩೯ನೇ ಕೃಷಿ ಮತ್ತು ಕೈಗಾರಿಕಾ ಪ್ರದರ್ಶನ ಉದ್ಘಾಟಿಸಿ ಮಾತನಾಡುತ್ತಿದ್ದರು. ಪ್ರಸ್ತುತ ಅಂತರ್‌ಜಲ ಮಟ್ಟ ಕುಸಿದಿದೆ. ಮಳೆ ನೀರಿನ ಪ್ರತಿ ಹನಿಯನ್ನು ಭೂಮಿಗೆ ಇಂಗಿಸಬೇಕು, ಅದಕ್ಕಾಗಿ ವೈಜ್ಞಾನಿಕವಾಗಿ ಅಗತ್ಯವಿರುವ ಕಡೆ ತಡೆಗೋಡೆ, ಅಣೆಕಟ್ಟೆಗಳನ್ನು ನಿರ್ಮಿಸಿ ಜಲಾನಯನ ಅಭಿವೃದ್ಧಿಗೊಳಿಸಬೇಕಿದೆ, ರಾಜ್ಯದ ಪ್ರತಿ ಜಿಲ್ಲೆಗಳಲ್ಲೂ ಇಂತಹ ಕಾಮಗಾರಿ ಕೈಗೊಳ್ಳಲಾಗಿದೆ ಎಂದರು.

ಪ್ರಕೃತಿ ವಿಕೋಪ ಮತ್ತು ಬೆಳೆ ನಷ್ಟದಲ್ಲಿ ರೈತರಿಗೆ ನೆರವಾಗುವ ಕೃಷಿ ವಿಮೆ ಪ್ರಯೋಜನ ಪಡೆಯಲು ಬಹಳಷ್ಟು ಜನ ಮುಂದಾಗುತ್ತಿದ್ದಾರೆ. ಕಳೆದ ವರ್ಷ ೬.೧೧ ಲಕ್ಷ ಜನ ವಿಮೆ ಪಡೆದು ೧.೩೨ ಕೋಟಿ ರೂ. ಹಣ ಪಾವತಿಸಲಾಗಿದೆ ಎಂದರು.

ರೈತರಿಗೆ ರೋಗ ರಹಿತ ಬೀಜಪೂರೈಕೆ ಕಡಿಮೆ ನೀರಿನಲ್ಲಿ ಹೆಚ್ಚು ಬೆಳೆ ಬೆಳೆಯುವ ತಂತ್ರಜ್ಞಾನ ಒದಗಿಸಲು ಪ್ರಯತ್ನಿಸುತ್ತಿರುವುದಾಗಿ ಹೇಳಿದರು.

ಕೃಷಿಕನ ಬಗ್ಗೆ ಭಾಷಣ ಮಾಡಲಾಗುತ್ತಿದೆಯೇ ಹೊರತು ಪ್ರಾಮಾಣಿಕ ಪ್ರಯತ್ನ ನಡೆಯುತ್ತಿಲ್ಲ. ವಿ.ವಿ.ಗಳ ಸಂಶೋಧನೆ, ಪ್ರಗತಿಪರ ಧೋರಣೆಗಳು ರೈತನಿಗೆ ತಲುಪಿಲ್ಲ ಎಂದು ವಿಷಾದಿಸಿದರು.

೧೨ನೇ ಶತಮಾನದ ಅನುಭವ ಮಂಟಪದಂತೆ ಸಿದ್ಧಗಂಗಾ ಶ್ರೀಗಳವರು ಜಾತ್ಯಾತೀತ ಸಂಸ್ಥೆ ನಡೆಸುತ್ತಿದ್ದಾರೆ. ರೈತರ ಪ್ರಗತಿಗೆ ಶ್ರೀಗಳ ಪ್ರಯತ್ನ ಸುತ್ಯಾರ್ಹ, ವಸ್ತು ಪ್ರದರ್ಶನಕ್ಕೆ ಅನುದಾನ ದೊರಕಿಸಿಕೊಡಲು ಪ್ರಯತ್ನಿಸುವುದಾಗಿ ಭರವಸೆ ನೀಡಿದರು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಉಸ್ತುವಾರಿ ಹಾಗೂ ಉನ್ನತ ಶಿಕ್ಷಣ ಸಚಿವ ಡಾ. ಜಿ. ಪರಮೇಶ್ವರ್ ಮಾತನಾಡಿ ಮಳೆಯ ಅಭಾವದಿಂದ ೧೬ ರಾಜ್ಯಗಳಲ್ಲಿ ಬರ ಬಂದಿದೆ. ಮನುಷ್ಯನ ಪ್ರಕೃತಿ ವಿರೋಧಿ ಕೃತ್ಯದಿಂದ ಪರಿಸರ ಚಕ್ರದ ಸರಣಿ ಕಡಿತಗೊಂಡು,





ಅಂತರ್‌ಜಲಮಟ್ಟ ತೀವ್ರವಾಗಿ ಕುಸಿದಿದೆ. ತಕ್ಷಣವೇ ಈ ಬಗ್ಗೆ ಎಚ್ಚೆತ್ತುಕೊಳ್ಳದಿದ್ದರೆ ಮುಂದಿನ ದಿನಗಳಲ್ಲಿ ಭೂಮಿಯಲ್ಲಿ ಜೀವರಾಶಿ ಸಂಪೂರ್ಣ ನಾಶವಾಗುವ ಸಂಭವವಿದೆ, ಈಗಾಗಲೇ ನೂರಾರು ಜೀವ ಸಂಕುಲ ಹಾಗೂ ೨೫೦೦ ಗಿಡ ಮೂಲಿಕೆಗಳು ನಾಶವಾಗಿ ಹೋಗಿವೆ ಎಂದರು.

ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ರೈತರು ಕೃಷಿ ಮತ್ತು ವಸ್ತುಪ್ರದರ್ಶನದಲ್ಲಿ ಭಾಗವಹಿಸಿ ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಳ್ಳಬೇಕೆಂದು ಕರೆ ನೀಡಿದರು. ರೈತ ದೇಶದ ಬೆನ್ನೆಲುಬು, ರೈತರು ಅಭಿವೃದ್ಧಿಯಾದರೆ ದೇಶ ಅಭಿವೃದ್ಧಿಯಾಗುತ್ತದೆ ಎಂದು ನುಡಿದರು.

ಈ ಸಂದರ್ಭದಲ್ಲಿ ಈ ಟಿ.ವಿ. ಸುದ್ದಿ ಸಂಯೋಜಕ ಶ್ರೀ ಮನೋಹರ್ ಎಡವಟ್ಟಿ ಮಾತನಾಡಿದರು. ಶಾಸಕ ಶ್ರೀ ಎಸ್. ಶಿವಣ್ಣ, ನಗರಾಭಿವೃದ್ಧಿ ಅಧ್ಯಕ್ಷ ಶ್ರೀ ಸಿದ್ಧಲಿಂಗೇಗೌಡ, ಮಾಜಿ ಅಧ್ಯಕ್ಷ ಶ್ರೀ ರೆಡ್ಡಿ ಚಿನ್ನಯಲ್ಲಪ್ಪ, ಸಿ.ಇ.ಓ. ಶ್ರೀ ಡಿ.ಕೆ. ರಂಗಸ್ವಾಮಿ, ಜಿ.ಪಂ. ಉಪಾಧ್ಯಕ್ಷ ಶ್ರೀ ಚೌದ್ರಿ ಟಿ. ರಂಗಪ್ಪ, ನಗರ ಸಭಾ ಸದಸ್ಯರಾದ ಶ್ರೀ ಡಿ.ಆರ್. ಬಸವರಾಜು, ಶ್ರೀ ಪಿ.ಎಸ್. ರಮೇಶ್, ಶ್ರೀ ನಯಾಜ್ ಅಹಮದ್, ಮದ್ಯಪಾನ ಸಂಯಮ ಮಂಡಳಿ ಅಧ್ಯಕ್ಷ ಶ್ರೀ ನರಸಿಂಹಯ್ಯ ಉಪಸ್ಥಿತರಿದ್ದರು.

ಶ್ರೀ ರೇಣುಕಯ್ಯ ಸ್ವಾಗತಿಸಿ, ಶ್ರೀ ಎಸ್. ಶಿವಕುಮಾರ್ ವರದಿ ಓದಿದರು. ಶ್ರೀ ಜಿ. ಕುಮಾರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು, ಶ್ರೀ ಎಸ್. ಗಂಗಾಧರಯ್ಯ ಅವರು ಶರಣು ಸಮರ್ಪಣೆ ಮಾಡಿದರು.

### *ಉತ್ತಮ ರಾಸುಗಳ ಪ್ರದರ್ಶನ ಹಾಗೂ ಬಹುಮಾನ ವಿತರಣಾ ಸಮಾರಂಭ*

ಮಾರ್ಚಿ ೫ರಂದು ನಡೆದ ಉತ್ತಮರಾಸುಗಳ ಪ್ರದರ್ಶನ ಹಾಗೂ ಬಹುಮಾನ ವಿತರಣಾ ಸಮಾರಂಭ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನಿಧ್ಯದಲ್ಲಿ ನಡೆಯಿತು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಜಿಲ್ಲಾ ಪಶುಪಾಲನ ಮತ್ತು ಪಶುವೈದ್ಯ ಇಲಾಖಾ ಉಪನಿರ್ದೇಶಕರಾದ ಶ್ರೀ ಎಂ.ಟಿ. ಮಂಜುನಾಥರವರು, ದೇಶೀಯ ತಳಿಗಳನ್ನು ಹೆಚ್ಚು ಹೆಚ್ಚು ಅಭಿವೃದ್ಧಿಪಡಿಸಬೇಕು. ಈ ನೆಲದ ಮಣ್ಣಿಗೆ ಸಂಸ್ಕೃತಿಗೆ ಹೊಂದುವ ರಾಸುಗಳನ್ನು ಸಾಕಬೇಕು ಎಂದು ಕರೆ ಕೊಟ್ಟರು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ವಿದ್ಯುತ್ ಅಧೀಕ್ಷಕ ಇಂಜಿನಿಯರ್ ಶ್ರೀ ಎಂ.ಪಿ. ಶಿವಕುಮಾರ್‌ರವರು ನಮ್ಮ ವಿದ್ಯಾರ್ಥಿಗಳಿಗೆ ವಾರಕ್ಕೊಮ್ಮೆಯಾದರೂ ವ್ಯವಸಾಯದ ಕೆಲಸ ಕಾರ್ಯಗಳ ಕಡೆ ಗಮನ ಹರಿಸುವಂತೆ ಮಾಡಬೇಕು. ವ್ಯವಸಾಯಕ್ಕೆ ಸಂಬಂಧಪಟ್ಟ ಪರಿಕರಗಳ ಪರಿಚಯ ಮಾಡಿಸಬೇಕು. ಇಂದು ಅವೆಲ್ಲಾ ಮರೆತೇ ಹೋಗಿವೆ. ಮುಂದಿನ ಪೀಳಿಗೆಗೆ ಅವೆಲ್ಲವೂ ಅವಶ್ಯಕ ಎಂದರು. ಜಿಲ್ಲಾ ಪಂಚಾಯತ್ ಉಪಕಾರ್ಯದರ್ಶಿಗಳಾದ ಶ್ರೀ ಎ.ಎಸ್. ರಾಮಚಂದ್ರಪ್ಪನವರು ಬಹುಮಾನ ವಿತರಿಸಿದರು. ಉತ್ತಮ ಸಾಕಾಣೆ ಮಾಡಿದವರಿಗೆ ಮೊದಲ ಬಹುಮಾನವಾಗಿ ಚಿನ್ನದ ಪದಕಗಳನ್ನು ವಿತರಿಸಲಾಯಿತು.



ಬಹುಮಾನಿತರಿಗೆ ಪಾರಿತೋಷಕಗಳು

ಈ ವರ್ಷ ಜಾತ್ರೆಗೆ ೬೯೦೦ ರಾಸುಗಳು, ೪೫೦ ಗಾಡಿಗಳು ಬಂದು ಕಲೆತಿದ್ದವು. ಉತ್ತಮ ರಾಸುಗಳ ಪ್ರದರ್ಶನದಲ್ಲಿ ೨೬ ಹೋರಿಕರುಗಳು, ೨೩ ಎತ್ತುಗಳನ್ನು ಆಯ್ಕೆ ಮಾಡಲಾಯಿತು ಪ್ರಥಮ ೯ ಬಹುಮಾನ, ದ್ವಿತೀಯ ೧೦ ತೃತೀಯ, ೧೧ ಮತ್ತು ಸಮಾದಾನಕರ ೧೯ ಬಹುಮಾನಗಳನ್ನು ಕೊಡಲಾಯಿತು. ಗ್ರಾಮೀಣ ರೈತರು ಪಶುಪಾಲನೆಯಲ್ಲಿ ಹೆಚ್ಚು ಶ್ರದ್ಧೆ, ಆಸಕ್ತಿ ನಿಷ್ಠೆಯಿಂದ ತೊಡಗುವಂತಾಗಲಿ ಎಂದು ಪ್ರೋತ್ಸಾಹದಾಯಕವಾಗಿ ೯ ಚಿನ್ನದ ಪದಕಗಳನ್ನು ವಿತರಿಸಲಾಯಿತು. ಈ ವರ್ಷ ಶ್ರೀಮಠದ ವತಿಯಿಂದ ೨೮ ಸಾವಿರ ರೂ. ಮೌಲ್ಯದ ಬಹುಮಾನ

ಗಳನ್ನು ನೀಡಲಾಯಿತು – ಜಿಲ್ಲಾ ಪಶುಪಾಲನಾ ಮತ್ತು ಪಶುವೈದ್ಯ ಇಲಾಖೆಯವರು ೫೦೦೦ ರೂ.ಗಳನ್ನು ಬಹುಮಾನವಾಗಿ ನೀಡಿದ್ದರು. ಈ ವರ್ಷದ ಜಾತ್ರೆಗೆ ಬಂದು ಸೇರಿದ ಹಳ್ಳಿಕಾರ್ ಮತ್ತು ಅಮೃತ್ ಮಹಲ್ ತಳಿಗಳ ಉತ್ತಮ ಸಾಕಾಣೆಯಲ್ಲಿ ರಾಮನಗರ ತಾಲ್ಲೂಕು ಮೊದಲ ಸ್ಥಾನದಲ್ಲಿತ್ತು. ಕಳೆದ ೪೬ ವರ್ಷಗಳಿಂದ ಬಹುಮಾನ ಪುರಸ್ಕಾರ ಪ್ರಶಸ್ತಿಗಳನ್ನು ನೀಡುತ್ತಾ ಬರಲಾಗುತ್ತಿದೆ.

ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ನುಡಿ ಸಂದೇಶದಲ್ಲಿ ''ನಮ್ಮ ಹಿಂದಿನ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಹೋಗುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ಹಿಂದಿನ ಧಾನ್ಯಗಳ ತಳಿಗಳೆಲ್ಲ ಮರತೇ ಹೋಗಿವೆ. ಹಿಂದೆ ಒಂದು ಹಳ್ಳಿ ಎಂದರೆ ಅಲ್ಲಿ ಗೋಕಟ್ಟೆ, ಗೋಮಾಳ ಗುಂಡುತೋಪು ಈ ಮೂರು ಅವಶ್ಯಕವಾಗಿ ಇರುತ್ತಿದ್ದವು. ಇಂದು ಅವೆಲ್ಲ ಮಾಯವಾಗಿವೆ. ರಾಸಾಯನಿಕ ಗೊಬ್ಬರಗಳ ಬಳಕೆಯಿಂದ ಆಹಾರವೆಲ್ಲಾ ವಿಷಮಯವಾಗಿವೆ. ಬೇವನ್ನು ಬಿತ್ತಿ ಮಾವನ್ನು ಬಯಸಿದರೆ ಫಲವಾದರೂ ಏನು? ಹಿಂದೆ ನಮ್ಮ ಪೂರ್ವಜರು ಗೋವುಗಳನ್ನು ಮಾತೆ ಎಂದು ಭಾವಿಸಿದ್ದರು. ಅದೊಂದು ರಾಷ್ಟ್ರೀಯ ಸಂಪತ್ತು ಎಂದು ಪರಭಾವಿಸಲಾಗಿತ್ತು ಇಂದು ವಿನಾಶದ ಅಂಚಿನಲ್ಲಿವೆ. ಗೋಹತ್ಯೆ ಪಂಚ ಮಹಾ ಪಾತಕಗಳಲ್ಲಿ ಒಂದು ಎಂಬುದನ್ನು ಅರಿಯಬೇಕು. ರೈತರು ಪರಿಶುದ್ಧವಾದ ಕಾಯಕ ಜೀವನ ನಡೆಸಬೇಕು ಬಸವಣ್ಣನವರ ಕಾಯಕ ತತ್ತ್ವ ಇಂದಿನ ಎಲ್ಲ ಸಮಸ್ಯೆಗಳಿಗೂ ರಾಮಬಾಣವಾಗಿದೆ'' ಎಂದು ತಿಳಿಸಿದರು.

ರಾಮನಗರ ತಾಲ್ಲೂಕು, ಗುಡ್ಡೆ ತಿಮ್ಮಸಂದ್ರ, ಗ್ರಾಮದ ಶ್ರೀ ಮರಿಸ್ವಾಮಪ್ಪ, ತುಮಕೂರು ತಾಲ್ಲೂಕು, ಮುತ್ಸಂದ್ರ ಗ್ರಾಮದ ಶ್ರೀ ಡಿ. ನಾರಾಯಣಪ್ಪ, ಬೆಂಗಳೂರು ಉತ್ತರ ತಾಲ್ಲೂಕು ಸೊಂಡೆಕೊಪ್ಪದ ಶ್ರೀ ಪಿ. ರಾಜಣ್ಣ ಬೆಂಗಳೂರು ರಾಜಾಜಿನಗರ ಶ್ರೀ ಸಿ. ರಘು, ತುಮಕೂರು ತಾಲ್ಲೂಕು ಹೆಬ್ಬೂರು ಗ್ರಾಮದ ಶ್ರೀ ಈ. ಚಿಕ್ಕಣ್ಣ, ರಾಮನಗರ ತಾಲ್ಲೂಕು ವಿರುಪಸಂದ್ರದ ಶ್ರೀ ಹೆಚ್. ಹೊನ್ನಪ್ಪ, ತುಮಕೂರು ನಗರದ ಶ್ರೀ ಕೋರಿ ಸದಾಶಿವಯ್ಯನವರ ಎನ್. ನಾಗರಾಜು, ಮಂಡ್ಯ ಜಿಲ್ಲೆ ನಾಗಮಂಗಲ ಟೌನ್, ಶ್ರೀ ಹೆಚ್. ಕೆಂಪೇಗೌಡ ತುಮಕೂರು ತಾಲ್ಲೂಕು ಹೊನ್ನೇನಹಳ್ಳಿ ಎಸ್. ಸುಧಾಕರ್ ಇವರುಗಳಿಗೆ ಪದಕಗಳನ್ನು ನೀಡಲಾಯಿತು.

ಪ್ರಾರಂಭದಲ್ಲಿ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆ, ಶ್ರೀ ಪಿ.ಎಸ್. ಚಂದ್ರಶೇಖರಯ್ಯನವರಿಂದ ಸ್ವಾಗತ ಶ್ರೀ ಜಿ. ಗವಿಸಿದ್ದಯ್ಯನವರಿಂದ ಸಂಕ್ಷಿಪ್ತ ಉತ್ತಮ ರಾಸುಗಳ ಪ್ರದರ್ಶನದ ವರದಿ. ಶ್ರೀ ಕೆ.ಹೆಚ್. ಶಿವರುದ್ರಯ್ಯನವರಿಂದ ವಂದನೆ, ಡಿ.ಎಸ್. ನಾಗರಾಜು ಕಾರ್ಯಕ್ರಮ ನಿರೂಪಣೆ ಮಾಡಿದರು.

## *ಅನ್ನದಾನ ಮತ್ತು ವಿದ್ಯಾದಾನಕ್ಕಿಂತ ಬೇರೊಂದು ದಾನವಿಲ್ಲ*

ರೈತರು ಬೆಳೆದ ಕೃಷಿ ಉತ್ಪನ್ನಗಳನ್ನು ಸಂರಕ್ಷಿಸಲು ಸಂಸ್ಕರಣ ಘಟಕಗಳನ್ನು ಸ್ಥಾಪಿಸುವ ಕಾರ್ಯಕ್ರಮ ಹಾಕಿಕೊಳ್ಳುವ ಉದ್ದೇಶ ಏದೆ ಎಂದು ರಾಜ್ಯ ಕೃಷಿ ಮಾರುಕಟ್ಟೆ ಸಚಿವ ಶ್ರೀ ಬಿ.ಎಸ್. ಪಾಟೀಲ್ ಸಾಸನೂರು ತಿಳಿಸಿದರು.

ಅವರು ತಮ್ಮ ಭಾಷಣದಲ್ಲಿ ವಿದ್ಯಾರ್ಥಿಗಳಿಗೆ ಉತ್ತಮ ಸಂಸ್ಕಾರ ನೀಡಿದರೆ ಸಂಸ್ಕಾರವಂತರಾಗಿ ಸಮಾಜದಲ್ಲಿ ಉತ್ತಮ ಪ್ರಜೆಯಾಗಲು ಸಾಧ್ಯವಾಗಲಿದೆ. ಈ ನಿಟ್ಟಿನಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರ ಇದಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿದೆ.

ಶ್ರೀ ಸಿದ್ಧಗಂಗಾಕ್ಷೇತ್ರಕ್ಕೆ ೬೦೦ ವರ್ಷಗಳ ಭವ್ಯ ಇತಿಹಾಸವಿದೆ. ಇಲ್ಲಿ ನಿರಂತರವಾಗಿ ದಾಸೋಹ ನಡೆದಿದೆ. ಇಂದು ೮ ಸಾವಿರ ಜನ ವಿದ್ಯಾರ್ಥಿಗಳು ಉಚಿತ ವಿದ್ಯಾಭ್ಯಾಸ ಹಾಗೂ ಪ್ರಸಾದ ಸ್ವೀಕರಿಸುತ್ತಿದ್ದಾರೆ. ಅನ್ನದಾನಕ್ಕಿಂತ ಬೇರೆ ಯಾವುದೇ ದಾನವಿಲ್ಲ ಎಂದರು.

ಇಂದು ಸಮಾಜದಲ್ಲಿ ದೊಡ್ಡವರೆನಿಸಿಕೊಳ್ಳುವ ಪ್ರಯತ್ನ ನಡೆದಿದ್ದು, ಸಜ್ಜನರಾಗಲು ಬಾವ, ವಾಚ, ಕ್ರಿಯಾಶುದ್ಧಿಯಿಂದ ಸಾಧ್ಯ. ನಡೆದಂತೆ ನುಡಿವ ಸಂಪ್ರದಾಯ ಇಂದು ಕಡಿಮೆಯಾಗಿದ್ದು, ಆದರ್ಶಮಯ ಜೀವನ ನಡೆಸಲು ಶ್ರೀಗಳವರ ಆಶೀರ್ವಾದ ಅಗತ್ಯ ಎಂದು ಸಚಿವರು ಹೇಳಿದರು.

ಶ್ರೀಕ್ಷೇತ್ರದಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದಾರೆ. ಇಲ್ಲಿನ ಸಂಸ್ಕಾರದಿಂದ ಉತ್ತಮ ನಾಗರೀಕರಾಗಿದ್ದಾರೆ. ಮಠದಿಂದ ಹಲವಾರು ಜನೋಪಯೋಗಿ ಕಾರ್ಯಗಳು ನಡೆಯುತ್ತಿವೆ. ಇವರ ತತ್ವ, ಸಂದೇಶಗಳು ಸಮಾಜಕ್ಕೆ ಪ್ರೇರಣೆಯಾಗಿವೆ ಎಂದರು. ಜ್ಞಾನ, ದಾಸೋಹ, ಅನ್ನ ದಾಸೋಹದ ಜೊತೆಗೆ ಸಮಾಜದ ಆರ್ಥಿಕ ಅಭಿವೃದ್ಧಿಗೆ ಆದ್ಯತೆ ನೀಡಿದ್ದಾರೆ. ಸರ್ಕಾರ ಮಾಡದ್ದನ್ನು ಶ್ರೀ ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ಇಲಾಖೆ ಕಳೆದ ೩೮ ವರ್ಷಗಳಿಂದ ನಡೆಸಿದ್ದು, ಇವರ ದೃಷ್ಟಿಕೋನ ವಿಶಾಲವಾದುದು ಎಂದು ತಿಳಿಸಿದರು.

ಅವರಿಂದು ಶ್ರೀ ಮಠದಲ್ಲಿ ಏರ್ಪಡಿಸಿದ್ದ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಮುಕ್ತಾಯ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದರು. ರೈತರು ಬೆಳೆದ ವಸ್ತುಗಳನ್ನು ಸಂಸ್ಕರಿಸುವ ಜೊತೆಗೆ ರಫ್ತು ವಿಭಾಗ ತೆರೆಯುವ ಉದ್ದೇಶವಿದ್ದು, ರೈತರಿಗೆ ಮಾರ್ಗದರ್ಶನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಎಂದು ತಿಳಿಸಿದರು.



ಕ್ಷೇತ್ರವಾರ್ತೆ




ರಾಜ್ಯ ಕೃಷಿಮಾರುಕಟ್ಟೆ ಸಚಿವ ಶ್ರೀ ಬಿ.ಎಸ್. ಪಾಟೀಲ ಸಾಸನೂರ ಅವರಿಂದ ಭಾಷಣ

ಕೃಷಿ ಉತ್ಪನ್ನಗಳನ್ನು ಹೆಚ್ಚು ಹೆಚ್ಚು ಬೆಳೆಯಲು ಜಲಸಂಪತ್ತು ಹೆಚ್ಚಾಗಬೇಕು. ಇದರಿಂದ ಲಾಭದಾಯಕ ಬೆಳೆ ಬೆಳೆಯಲು ಸಾಧ್ಯ. ಜಲಸಂಪತ್ತು ಉತ್ಪನ್ನ ಹಾಗೂ ಅವುಗಳಿಗೆ ಯೋಗ್ಯ ಬೆಲೆ ಹಿನ್ನೆಲೆಯಲ್ಲಿ ಸರ್ಕಾರ ಕಾರ್ಯಕ್ರಮ ಹಾಗೂ ಸುಧಾರಣಾ ನೀತಿ ಜಾರಿಗೆ ತಂದಿದೆ ಎಂದರು.

ವಿಧಾನ ಪರಿಷತ್ ಸದಸ್ಯ ಶ್ರೀ ಕೆ.ಎನ್ ರಾಜಣ್ಣ ಮಾತನಾಡಿ, ರಾಷ್ಟ್ರದಲ್ಲಿ ವ್ಯವಸಾಯಕ್ಕೆ ಹೆಚ್ಚಿನ ಆದ್ಯತೆ ಇದ್ದು, ರೈತನ ಉತ್ಪನ್ನಗಳಿಗೆ ಬೆಲೆ ನಿರ್ಧಾರ ವ್ಯವಸ್ಥೆಯ ನೀತಿ ಜಾರಿಗೊಳಿಸ ಬೇಕೆಂದರು. ಇದರಿಂದ ರೈತ ಆರ್ಥಿಕವಾಗಿ ಬೆಳೆಯಲು ಸಾಧ್ಯ ಎಂದರು.

ಜಿಲ್ಲಾ ಪಂಚಾಯಿತಿ ಅಧ್ಯಕ್ಷ ಶ್ರೀ ಕೆ. ಲಿಂಗರಾಜು ಮಾತನಾಡಿ, ರೈತರು ಕೃಷಿಯನ್ನೇ ಅವಲಂಬಿಸಿದರೆ ಬೆಳವಣಿಗೆ ಸಾಧ್ಯವಿಲ್ಲ. ಹೈನುಗಾರಿಕೆ, ಉಪಕಸುಬುಗಳನ್ನು ಅಳವಡಿಸಿ ಕೊಳ್ಳುವಂತೆ ಕರೆ ನೀಡಿದರು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ದಿವ್ಯಸಾನಿಧ್ಯ ವಹಿಸಿ ಆಶೀರ್ವಚನ ನೀಡಿದರು. ಅವರು ತಮ್ಮ ಆಶೀರ್ವಚನದಲ್ಲಿ 'ಜನಸಂಖ್ಯೆಗೆ ಅನುಗುಣವಾಗಿ ಕೃಷಿ ಉತ್ಪನ್ನಗಳು ಹೆಚ್ಚಾಗಬೇಕು ಹಳೆಯ ಪದ್ಧತಿಗಳನ್ನು ಅನುಸರಿಸಿ ಹೆಚ್ಚಿನ ಉತ್ಪನ್ನ ಗಳನ್ನು ಬೆಳೆಯಬೇಕು. ಈ ನಿಟ್ಟಿನಲ್ಲಿ ಸರ್ಕಾರ ರೈತರಿಗೆ ಪ್ರೋತ್ಸಾಹ ನೀಡಬೇಕು. ರಾಷ್ಟ್ರ ಎಂದರೆ ಬರೀ ನಗರ ಪ್ರದೇಶಗಳಲ್ಲ ಹಳ್ಳಿಗಳೂ ಸೇರಿವೆ ಎಂಬುದನ್ನು ಮರೆಯಬಾರದು. ಹಳ್ಳಿಗಳ ಸರ್ವಾಂಗೀಣ ಅಭಿವೃದ್ಧಿಯಾಗದ ಹೊರತು ರಾಷ್ಟ್ರದ ಅಭಿವೃದ್ಧಿ ಯಾಗುವುದಿಲ್ಲ' ಎಂದು ಕರೆ ನೀಡಿದರು. ಕಾರ್ಯಕ್ರಮ ದಲ್ಲಿ ಜಿಲ್ಲಾಧಿಕಾರಿ ಶ್ರೀ ಎಂ.ಬಿ. ದ್ಯಾಬೇರಿ ನಗರ ಸಭಾಧ್ಯಕ್ಷ ಶ್ರೀ ಟಿ.ಪಿ. ಮಂಜುನಾಥ್, ಉಪಾಧ್ಯಕ್ಷೆ ಶ್ರೀಮತಿ ಟಿ.ಸಿ. ಕಲ್ಪನ, ರಾಜ್ಯ ವಿಶ್ವಕಾರ್ಯಕ್ರಮದ ನಿರ್ದೇಶಕ ಶ್ರೀ ಉಮಾಕಾಂತ್, ಎ.ಪಿ.ಎಂ.ಸಿ. ಅಧ್ಯಕ್ಷ ಶ್ರೀ ಪಂಚಾಕ್ಷರಯ್ಯ, ಜಿಲ್ಲಾ ಪಂಚಾಯಿತಿ ಉಪಕಾರ್ಯದರ್ಶಿ ಶ್ರೀ ಗೋವಿಂದರಾಜು ಭಾಗವಹಿಸಿದರು. ಶ್ರೀದೇವಿ ಸಂಗಡಿಗರ ಪ್ರಾರ್ಥನೆಯಿಂದ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀ ಎಸ್. ಶಿವಕುಮಾರ ಸ್ವಾಗತಿಸಿದರು. ಶ್ರೀ ಕೆಂ.ಬ. ರೇಣುಕಯ್ಯ ವಸ್ತು ಪ್ರದರ್ಶನದ ವರದಿ ಮಂಡಿಸಿದರು. ಶ್ರೀ ಎಂ. ನಂದೀಶ್ ಕಾರ್ಯಕ್ರಮ ನಿರೂಪಿಸಿದರು.

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೪೭. | **ಶ್ರೀ ಬಸವೇಶ್ವರ ಸಮಿತಿ ಮೈಕೋ (ರಿ.),**<br>ನಂ. ೩೫೫, ೬ನೇ ಮುಖ್ಯರಸ್ತೆ,<br>ಲಕ್ಕಸಂದ್ರ ಲೇ ಔಟ್, ಬನ್ನೇರುಘಟ್ಟ ರಸ್ತೆ,<br>ಬೆಂಗಳೂರು – ೫೬೦ ೦೩೦. | ೧೧,೧೧೧.೦೦ |
| ೮೪೮. | **ಮೆ. ಕೇತನ್ ಎಂಟರ್‌ಪ್ರೈಸಸ್**<br>ನಂ. ೯೯, ೨ನೇ ಹಂತ,<br>ಗೆಳೆಯರ ಬಳಗ,<br>ಬೆಂಗಳೂರು – ೫೬೦ ೦೮೬.<br>*(ಮುದ್ದಾಸ್ ಫ್ಯಾಮಿಲಿ ಸ್ಮರಣಾರ್ಥ)* | ೨೦,೦೦೦.೦೦ |
| ೮೪೯. | **ಶಿಕ್ಷಣಾರ್ಥಿಗಳು**<br>ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆ<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು – ೪. | ೨,೫೦೦.೦೦ |
| ೮೫೦. | **ಪ್ರಾಂಶುಪಾಲರು ಮತ್ತು ಸಿ.ಇ.ಟಿ. ಸ್ಟಾಫ್**<br>**ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು**<br>ಬಿ.ಹೆಚ್. ರಸ್ತೆ,<br>ತುಮಕೂರು – ೫೭೨ ೧೦೨. | ೧,೦೦,೦೦೧.೦೦ |
| ೮೫೧. | **ಶ್ರೀಮತಿ ಅಂಬುಜಮ್ಮ ಮತ್ತು**<br>**ಶ್ರೀ ಟಿ.ಎಂ. ಚಂದ್ರಪ್ಪ,**<br>೧೩ನೇ ಕ್ರಾಸ್, ಸೋಮೇಶ್ವರಪುರಂ ಬಡಾವಣೆ<br>ತುಮಕೂರು ಜಿಲ್ಲೆ – ೫೭೨ ೧೦೨. | ೨,೦೦೦.೦೦ |
| ೮೫೨. | **ಶ್ರೀಮತಿ ಪಿ.ಹೆಚ್. ರುದ್ರಾಣಿ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಹಿರಿಯ ಪ್ರಾಥಮಿಕ ಶಾಲೆ,<br>ಜಂಗಮಮಠ, ಶಿವನಗರ,<br>ಬೆಂಗಳೂರು – ೫೬೦ ೦೧೦. | ೧,೦೦೦.೦೦<br>(೧ನೇ ಕಂತು) |
| ೮೫೩. | **ಶ್ರೀ ಜಿ.ಎಂ. ಮಲ್ಲಿನಾಥಯ್ಯ**<br>ನಂ. ೩.೧೩/೨, ಪೆವಿಲಿಯನ್ ರಸ್ತೆ,<br>ಪಿ.ಜೆ. ಬಡಾವಣೆ, ದಾವಣಗೆರೆ. | ೨,೦೦೦.೦೦ |
| ೮೫೪. | **ಶ್ರೀ ಎಸ್. ಗುರುಪ್ರಸಾದ್**<br>ನಂ. ೪೩., ೧ನೇ ಮಹಡಿ, ಆರ್.ಕೆ. ಲೇಔಟ್,<br>೩.ನೇ ಸ್ಟೇಜ್, ಪದ್ಮನಾಭನಗರ,<br>ಬೆಂಗಳೂರು – ೫೬೦ ೦೭೦. | ೧೦,೦೦೧.೦೦ |
| ೮೫೫. | **ಶ್ರೀ ಕೆ.ಎಸ್. ಶಿವರುದ್ರಯ್ಯ**<br>ಬಿನ್ ಲಿಂ. ಸಿದ್ಧಪ್ಪ,<br>ನಂ. ೨೩೯, ಶ್ರೀ ರುದ್ರೇಶ್ವರ ನಿಲಯ<br>೧ನೇ ಸ್ಟೇಜ್, ೩ನೇ ಬ್ಲಾಕ್<br>೪ನೇ ಕ್ರಾಸ್, ನಾಗರಬಾವಿ,<br>ಬೆಂಗಳೂರು – ೫೬೦ ೦೭೨. | ೧,೦೫೦.೦೦<br>(೩ನೇ ಕಂತು) |
| ೮೫೬. | **ಕು. ಜಿ.ಆರ್. ಅನುಪಮಾ ಬಿನ್ ಜಿ.ಸಿ. ರಾಜಣ್ಣ**<br>೪ನೇ ಮುಖ್ಯರಸ್ತೆ, ಸಿದ್ಧಗಂಗಾ ಬಡಾವಣೆ,<br>ತುಮಕೂರು – ೨. | ೨,೫೦೦.೦೦ |
| ೮೫೭. | **ಶ್ರೀಮತಿ ವೈ.ಯಂ ಮಹದೇವಮ್ಮ,**<br>**ಕೋ ಲೇಟ್. ಶ್ರೀ ಎಸ್. ಜಯಶೇಖರಸ್ವಾಮಿ**<br>ಪ್ರೊಪ್ರೈಟರ್,<br>ಶ್ರೀ ನಂಜುಂಡೇಶ್ವರಸ್ವಾಮಿ ರೈಸ್ ಮಿಲ್<br>ಮತ್ತು ಸಾಮಿಲ್,<br>ಕಾಲೇಜು ರಸ್ತೆ, ಟಿ. ನರಸೀಪುರ,<br>ಮೈಸೂರು ಜಿಲ್ಲೆ. | ೨,೧೦೦.೦೦ |
| ೮೫೮. | **ಶ್ರೀ ಹೆಚ್.ಎಂ. ಸಿದ್ಧಪ್ಪ**<br>ಮುಖ್ಯಶಿಕ್ಷಕರು,<br>ಜನಸೇವಾ ವಿದ್ಯಾಕೇಂದ್ರ,<br>ಚನ್ನೇನಹಳ್ಳಿ, ತಾವರೆಕೆರೆ ಮಾರ್ಗ,<br>ಮಾಗಡಿ ಮುಖ್ಯರಸ್ತೆ. | ೧,೦೦೦.೦೦ |
| ೮೫೯. | **ಶ್ರೀ ಸಿ. ರೇಣುಕಾರಾಧ್ಯ,**<br>ಮುಖ್ಯ ಶಿಕ್ಷಕರು,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ<br>ಕೋರಾ, ತುಮಕೂರು ತಾಲ್ಲೂಕು | ೧,೦೦೧.೦೦<br>(೧ನೇ ಕಂತು) |
| ೮೬೦. | **ಶ್ರೀ ಬಿ.ಆರ್. ಸಿದ್ಧನಂಜಯ್ಯ,** ಸ.ಶಿ.<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೧. | **ಶ್ರೀ ಎ.ಆರ್. ಶಿವಣ್ಣ**<br>ಕನ್ನಡ ಶಿಕ್ಷಕರು,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೨. | **ಶ್ರೀ ಹೆಚ್.ಎಸ್. ಅಡವೀಸಿದ್ಧಯ್ಯ,** ಸ.ಶಿ.<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೬೩. | **ಶ್ರೀ ಟಿ.ಎಸ್. ರಾಜಶೇಖರ್**<br>ಸಹ ಶಿಕ್ಷಕರು,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೪. | **ಶ್ರೀಮತಿ ಇಂದಿರಾಪ್ರಿಯದರ್ಶಿನಿ**<br>ಸಹ ಶಿಕ್ಷಕರು,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೫. | **ಶ್ರೀ ಶಿವಗಂಗಯ್ಯ**<br>ದೈಹಿಕ ಶಿಕ್ಷಣ ಶಿಕ್ಷಕರು,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೬. | **ಶ್ರೀ ಹೆಚ್.ಡಿ. ಶಿವಕುಮಾರ**<br>ವೃತ್ತಿ ಶಿಕ್ಷಕರು,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೭. | **ಶ್ರೀ ಸಿ. ಲಕ್ಷ್ಮೀನರಸಯ್ಯ**<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಮಹಾಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೮. | **ಶ್ರೀ ಬಿ.ಸಿ. ಗಂಗಣ್ಣ**<br>ಪ್ರ.ಶಾ. ಸಹಾಯಕ,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೬೯. | **ಶ್ರೀ ರಂಗಯ್ಯ**<br>'ಡಿ' ಗ್ರೂಫ್ ನೌಕರ,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೭೦. | **ಶ್ರೀಮತಿ ಶಾರದಮ್ಮ**<br>'ಡಿ' ಗ್ರೂಫ್ ನೌಕರರು,<br>ಶ್ರೀ ಮಹಲಿಂಗೇಶ್ವರ ಪ್ರೌಢಶಾಲೆ<br>ಕೋರಾ, ತುಮಕೂರು ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೮೭೧. | **ಶ್ರೀ ಬಿ.ಎಸ್. ಚಂದ್ರಶೇಖರಯ್ಯ**<br>ದೈಹಿಕ ಶಿಕ್ಷಣ ಶಿಕ್ಷಕರು,<br>ಶ್ರೀ ಶಿವಕುಮಾರಸ್ವಾಮಿ ಗ್ರಾ. ಪ್ರೌ. ಶಾ.<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು. | ೨,೦೦೨.೦೦ |
| ೮೭೨. | **ಶ್ರೀ ಎ. ಹನುಮಂತರಾಯಪ್ಪ,**<br>ನಂ. ೮, ಭದ್ರಪ್ಪ ಬಡಾವಣೆ,<br>ನಾಗಶೆಟ್ಟಿಹಳ್ಳಿ, ಆರ್.ಎಂ.ವಿ. ೨ನೇ ಹಂತ,<br>ಬೆಂಗಳೂರು – ೫೬೦ ೦೯೪. | ೨,೨೨೧.೦೦ |
| ೮೭೩. | **ಮುಖ್ಯ ಶಿಕ್ಷಕರು ಮತ್ತು ವಿದ್ಯಾರ್ಥಿಗಳು**<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು ತಾ. | ೩,೧೦೫.೦೦ |
| ೮೭೪. | **ಶ್ರೀ ಆರ್. ಶಿವಶಂಕರಯ್ಯ**<br>ಮುಖ್ಯಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಮನ್ವಯ ಶಿಕ್ಷಣ ಕೇಂದ್ರ<br>ಶ್ರೀ ಸಿದ್ಧಗಂಗಾ ಮಠ, ತುಮಕೂರು ತಾ. | ೨,೦೦೧.೦೦ |
| ೮೭೫. | **ಶ್ರೀ ಎಂ.ವಿ. ಗಂಗಾಧರಯ್ಯ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಮನ್ವಯ ಶಿಕ್ಷಣ ಕೇಂದ್ರ<br>ಶ್ರೀ ಸಿದ್ಧಗಂಗಾ ಮಠ, ತುಮಕೂರು ತಾ. | ೨,೦೦೧.೦೦ |
| ೮೭೬. | **ಶ್ರೀ ಮಲ್ಲಪ್ಪ ಹಾನಗಲ್**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಮನ್ವಯ ಶಿಕ್ಷಣ ಕೇಂದ್ರ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ತಾಲ್ಲೂಕು | ೨,೦೦೧.೦೦ |
| ೮೭೭. | **ಶ್ರೀ ಮೂಲೇಮನೆ ಬಸವನಗೌಡ**<br>ಅಚ್ಚೊಳ್ಳಿ, ಸಿರಿಗುಪ್ಪ ತಾಲ್ಲೂಕು,<br>ಬಳ್ಳಾರಿ ಜಿಲ್ಲೆ. | ೬,೦೧೧.೦೦ |
| ೮೭೮. | **ಶ್ರೀ ಹೆಚ್. ನಂಜಪ್ಪ**<br>ನಿವೃತ್ತ ಶಿಕ್ಷಕರು,<br>ಬಿನ್ ಅಣ್ಣಾಜಪ್ಪ,<br>ಟಿ. ಮಾಯಗೊಂಡನಹಳ್ಳಿ,<br>ಹಳ್ಳಿ ಮೈಸೂರು ಅಂಚೆ, ಹೊಳೇನರಸೀಪುರ ತಾ.<br>ಹಾಸನ ಜಿಲ್ಲೆ. | ೨,೦೦೧.೦೦ |
| ೮೭೯. | **ಶ್ರೀ ಬಿ.ಹೆಚ್. ಗಂಗಾಧರಯ್ಯ**<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ<br>ಹಿರಿಯ ಪ್ರಾಥಮಿಕ ಶಾಲೆ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ತಾಲ್ಲೂಕು. | ೨,೫೦೧.೦೦ |
| ೮೮೦. | **ಶ್ರೀಮತಿ ಕೆಂಪಹನುಮಕ್ಕ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ<br>ಹಿರಿಯ ಪ್ರಾಥಮಿಕ ಶಾಲೆ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ತಾಲ್ಲೂಕು. | ೨,೨೫೧.೦೦ |

*(ಮುಂದುವರಿಯುತ್ತದೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೭೦. | ಶ್ರೀ ಜಿ. ಚಂದ್ರಶೇಖರಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ದಗಂಗಾ ಸಂಸ್ಕೃತ ಪಾಠಶಾಲೆ,<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೪೭೧. | ಶ್ರೀಮತಿ ಪುಷ್ಪಾವತಿ ಕೋಂ.<br>ಕೆ.ಜಿ. ಗೋವಿಂದಯ್ಯ<br>ನಂ. ೧೧೨೬, ೧೧ನೇ ಕ್ರಾಸ್,<br>ಆದರ್ಶ ಲೇ ಔಟ್,<br>ವೆಸ್ಟ್ ಆಫ್ ಕಾರ್ಡ್ ರಸ್ತೆ,<br>೩ನೇ ಸ್ಟೇಜ್, ಬಸವೇಶ್ವರನಗರ,<br>ಬೆಂಗಳೂರು – ೫೬೦ ೦೭೯. | ೧,೦೦೧.೦೦ |
| ೪೭೨. | ಶ್ರೀ ಸನಾಉಲ್ಲಾಖಾನ್<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೦.೦೦ |
| ೪೭೩. | ಡಾ. ಪಿ.ಎಂ. ಶಿವಮೂರ್ತಿ ಬಿನ್ ಪುಟ್ಟಪ್ಪ<br>ಸಂಜೀವಿನಿ ಕ್ಲೀನಿಕ್,<br>ಚೇಳೂರು, ಗುಬ್ಬಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೧.೦೦ |
| ೪೭೪. | ಶ್ರೀ ಎಲ್. ಶಿವಕುಮಾರಸ್ವಾಮಿ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ರಾಮಗೊಂಡನಹಳ್ಳಿ,<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೪೭೫. | ಶ್ರೀ ಬಿ.ಆರ್. ರಾಮಕೃಷ್ಣ<br>ಮುಖ್ಯ ಶಿಕ್ಷಕರು,<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ,<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು. | ೧,೦೦೧.೦೦ |
| ೪೭೬. | ಶ್ರೀ ಎಸ್.ಆರ್. ನಟರಾಜು<br>ಸಹ ಶಿಕ್ಷಕರು,<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ,<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು | ೧,೦೦೧.೦೦ |
| ೪೭೭. | ಶ್ರೀ ಎಂ.ಸಿ. ರಾಮಚಂದ್ರಪ್ಪ<br>ದೈಹಿಕ ಶಿಕ್ಷಕರು,<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು | ೧,೦೦೧.೦೦ |
| ೪೭೮. | ಶ್ರೀ ಕೆ. ಕಂಚಿರಾಯ<br>ವೃತ್ತಿ ಶಿಕ್ಷಕರು,<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು | ೧,೦೦೧.೦೦ |
| ೪೭೯. | ಶ್ರೀ ಜಿ.ಸಿ. ಕೃಷ್ಣಮೂರ್ತಿ<br>ಚಿಕ್ಕಮಗಳೂರು ಜಿಲ್ಲಾಧಿಕಾರಿಗಳ ಪಿ.ಎ.,<br>ಚಿಕ್ಕಮಗಳೂರು ಜಿಲ್ಲೆ. | ೧,೦೦೧.೦೦ |
| ೪೮೦. | ಶ್ರೀ ಹೆಚ್. ಗಂಗಪ್ಪನವರು<br>ಹರಿವೇಸಂದ್ರ, ತ್ಯಾಮಗೊಂಡ್ಲು ಹೋಬಳಿ<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೫೦೦.೦೦ |
| ೪೮೧. | ಶ್ರೀ ಎಸ್. ಶಂಕರಪ್ಪ<br>'ಸಿದ್ಧರಾಮಕೃಪ'<br>೨ನೇ ಮುಖ್ಯರಸ್ತೆ, ೭ನೇ ಕ್ರಾಸ್,<br>ವಿಜಯನಗರ, ತುಮಕೂರು. | ೧,೦೦೧.೦೦ |
| ೪೮೨. | ಶ್ರೀ ಎಂ.ಎಸ್. ಮಲ್ಲಿಕಾರ್ಜುನಯ್ಯ<br>ಸಹ ಶಿಕ್ಷಕರು,<br>ಶ್ರೀ ಶಾಲಿವಾಹನ ಪ್ರೌಢಶಾಲೆ,<br>ತಂಡಗ, ತುರುವೇಕೆರೆ ತಾಲ್ಲೂಕು<br>ತುಮಕೂರು ಜಿಲ್ಲೆ. | ೧,೦೦೧.೦೦ |
| ೪೮೩. | ಶ್ರೀ ಎಂ. ನಾಗರಾಜು<br>ಸೇವಕ, ಶ್ರೀ ಶಾಲಿವಾಹನ ಪ್ರೌಢಶಾಲೆ,<br>ತಂಡಗ, ತುರುವೇಕೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೧.೦೦ |
| ೪೮೪. | ಶ್ರೀ ಜಿ.ಹೆಚ್. ಸೋಮಶೇಖರಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಶಾಲಿವಾಹನ ಪ್ರೌಢಶಾಲೆ,<br>ತಂಡಗ, ತುರುವೇಕೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೧.೦೦ |
| ೪೮೫. | ಶ್ರೀ ಬಿ. ಸಿದ್ದಯ್ಯ<br>ಮಾಜಿ ಪಟೇಲರು,<br>ಮೊದಲಕೋಟೆ ಮತ್ತು ಅಂಚೆ,<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |

*(ಮುಂದುವರಿಯುತ್ತದೆ)*

RNI No. 17139/69 "Siddaganga" Monthly - postal Reg.No. KA/SK/TMR/385/2003




ಸಿದ್ಧಗಂಗಾ ತಾಂತ್ರಿಕ ಕಾಲೇಜು ಆಶ್ರಯದಲ್ಲಿ ನೂತನವಾಗಿ ನಿರ್ಮಿಸಿರುವ ಸ್ನಾತಕೋತ್ತರ ಆಡಳಿತ ನಿರ್ವಹಣಾ ಅಧ್ಯಯನ ಕೇಂದ್ರದ ಕಟ್ಟಡವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಟಿ.ಎನ್. ಚತುರ್ವೇದಿ ಅವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಉನ್ನತ ಶಿಕ್ಷಣ ಸಚಿವ ಡಾ. ಜಿ. ಪರಮೇಶ್ವರ ಮೊದಲಾದ ಗಣ್ಯರು ಉಪಸ್ಥಿತರಿದ್ದರು.




ಫೆಬ್ರವರಿ ೧೯ರಂದು ಶ್ರೀಮಠದಲ್ಲಿ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಉದ್ಘಾಟನೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಕೃಷಿ ಸಚಿವರಾದ ಶ್ರೀ ವಿ.ಎಸ್. ಕೌಜಲಗಿ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಉನ್ನತ ಶಿಕ್ಷಣ ಸಚಿವರಾದ ಡಾ. ಜಿ. ಪರಮೇಶ್ವರ್, ಶಾಸಕರಾದ ಶ್ರೀ ಎಸ್. ಶಿವಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.